KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೧೧, ೨೦೦೬ (ವೈಶಾಖ ೨೧, ಶಕವರ್ಷ ೧೯೨೮) | ಸಂಚಿಕೆ ೧೯ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಮಾಂಡೆಂಟ್‌ರವರ ಕಛೇರಿ, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರು**

**ಟೆಂಡರ್ ಕಂ. ಬಹಿರಂಗ ಹರಾಜು**

**ಸಂಖ್ಯೆ: 20/ರಾಜ್ಯಶಸ್ತ್ರಾಗಾರ/ಅನುಪಯುಕ್ತ/04/2006-07, ದಿನಾಂಕ: 21ನೇ ಏಪ್ರಿಲ್ 2006**

**ವಿಷಯ:** 3ನೇ ಪಡೆಯ ಅಧೀನದಲ್ಲಿರುವ ರಾಜ್ಯ ಶಸ್ತ್ರಾಗಾರದಲ್ಲಿ ಸಂಗ್ರಹಿತವಾಗಿರುವ ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಖಾಲಿ ಖೋಕಾಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾನ್ಯ ಡಿ.ಜಿ. ಮತ್ತು ಐ.ಜಿ.ಪಿ., ಕರ್ನಾಟಕ ರಾಜ್ಯ ಬೆಂಗಳೂರು ರವರ ಪತ್ರ ಸಂಖ್ಯೆ: 29/ಆಯುಧ/2002-03, ದಿನಾಂಕ: 01.04.2006.

2) ಸರ್ಕಾರದ ಆದೇಶ ಸಂಖ್ಯೆ: ಕಾ.ಇ/238/ಇಟಿಖ, ದಿನಾಂಕ: 22.10.2002.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ಪ್ರಮಾಣದಂತೆ 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರು-34ರ ಘಟಕದ ಅಧೀನದಲ್ಲಿರುವ ರಾಜ್ಯ ಶಸ್ತ್ರಾಗಾರದಲ್ಲಿ ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಖಾಲಿ ಖೋಕಾಗಳು ದಾಸ್ತಾನು ಇದ್ದು, ಇವುಗಳನ್ನು 3ನೇ ಪಡೆ, ಕೆ.ಎಸ್.ಆರ್.ಪಿ. ಘಟಕದ ರಾಜ್ಯ ಶಸ್ತ್ರಾಗಾರದ ಆವರಣದಲ್ಲಿ ದಿನಾಂಕ: 25.05.2006 ರಂದು ಬೆಳಿಗ್ಗೆ 11.00 ಗಂಟೆಗೆ ಟೆಂಡರ್ ಕಂ. ಬಹಿರಂಗ ಹರಾಜು ಮಾಡಲಾಗುವುದು.

**ಹರಾಜು ಮಾಡಲು ಉದ್ದೇಶಿಸಿರುವ ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಖಾಲಿ ಖೋಕಾಗಳ ವಿವರಗಳು**

| ಕ್ರ.ಸಂ. | ವಿವರಗಳು | ವರ್ಷ | ಪ್ರಮಾಣ |
|---|---|---|---|
| 1 | ಹಿತ್ತಾಳೆ ಖಾಲಿ ಖೋಕಾಗಳು | ನವೆಂಬರ್ 2005ರ ಅಂತ್ಯಕ್ಕೆ ಇರುವ ದಾಸ್ತಾನು | 8138.106 ಕೆಜಿ. |
| 2 | ಅಲ್ಯೂಮಿನಿಯಂ ಖಾಲಿ ಖೋಕಾಗಳು | ನವೆಂಬರ್ 2005ರ ಅಂತ್ಯಕ್ಕೆ ಇರುವ ದಾಸ್ತಾನು | 17.500 ಕೆಜಿ. |

ಮೇಲೆ ನಮೂದಿಸಿರುವ ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಖಾಲಿ ಖೋಕಾಗಳನ್ನು ಈ ಕೆಳಕಾಣಿಸಿದ ಷರತ್ತುಗಳೊಂದಿಗೆ ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರುರವರ ವಿಳಾಸಕ್ಕೆ "ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಖಾಲಿ ಖೋಕಾಗಳು" ಎಂದು ಬರೆದು ಕಳುಹಿಸಬೇಕು.

2) ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರದಲ್ಲಿ ಬರೆದಿರಬೇಕು.

3) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

4) ಬಿಡ್‌ದಾರರು/ಟೆಂಡರ್‌ದಾರರು ರೂ.10,000/- (ಹತ್ತು ಸಾವಿರ) ಗಳನ್ನು ಹರಾಜು ಪ್ರಾರಂಭಿಸುವುದಕ್ಕಿಂತ ಮೊದಲು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ ಬೆಂಗಳೂರು ರವರ ಪದನಾಮದಲ್ಲಿ ಠೇವಣಿಯಾಗಿ ಇಡತಕ್ಕದ್ದು.

5) ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್‌ನ್ನು ಮುನ್ಸೂಚನೆಯಿಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.

6) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 24.05.2006ರ ಅಪರಾಹ್ನ 17.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಕಮಾಂಡೆಂಟ್‌ರವರು ಸಾರ್ವಜನಿಕರ ಸಮಕ್ಷಮದಲ್ಲಿ ಸೀಲ್ಡ್ ಕವರ್ ತೆರೆದು ಬಹಿರಂಗ ಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ / ಸವಾಲುದಾರರೆಂದು ಪರಿಗಣಿಸಲಾಗುವುದು.

8) ಯಶಸ್ವಿಯಾದ ಟೆಂಡರ್‌ದಾರರು ಬಿಡ್ ಮೊಬಲಗನ್ನು ವಸ್ತುಗಳನ್ನು ಖರೀದಿಸಿದ ದಿನವೇ ಪೂರ್ಣವಾಗಿ ನಗದಾಗಿ ಪಾವತಿಸತಕ್ಕದ್ದು (ಚೆಕ್ ಸ್ವೀಕರಿಸುವುದಿಲ್ಲ) ತಪ್ಪಿದಲ್ಲಿ ಖರೀದಿಸಿದ ವಸ್ತುಗಳನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನ ಮೌಲ್ಯ ಕಡಿಮೆಯಾದಲ್ಲಿ ತಪ್ಪಿತಸ್ಥರಾದ ಮೊದಲ ಖರೀದಿದಾರರಾದ ನೀವೇ ಭರಿಸತಕ್ಕದ್ದು.

9) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ಸವಾಲುದಾರರಿಗೆ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.

10) ಸರ್ಕಾರದ ಅನುಪಯುಕ್ತ ಸಾಮಾಗ್ರಿಗಳ ಹರಾಜಿನಲ್ಲಿ ಭಾಗವಹಿಸುವ ಟೆಂಡರ್/ಸವಾಲುದಾರರು ಸರ್ಕಾರಿ ನಿಯಮವನ್ನು ಪಾಲಿಸಬೇಕು.

11) ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಸಾಮಾಗ್ರಿಗಳ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ/ನಿಯಮಗಳ ಮೇಲೆ ವಸೂಲು ಮಾಡಲಾಗುವುದು.

12) ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್:ಸವಾಲುದಾರರು ಮುಂಗಡವಾಗಿ ಕಟ್ಟಲ್ಪಟ್ಟ ಠೇವಣಿ ಹಣದಲ್ಲಿ ವಸೂಲಿ ಮಾಡುವ ಅಧಿಕಾರವು ಕಮಾಂಡೆಂಟ್‌ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.

13) ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕಮಾಂಡೆಂಟ್‌ರವರು ಹೊಂದಿರುತ್ತಾರೆ.

14) ಸದರಿ ಖಾಲೀ ಖೋಕಾಗಳನ್ನು ವಿರೂಪಗೊಳಿಸಿ ಚಚ್ಚಿದ್ದು, ಹೇಗಿದೆಯೋ ಹಾಗೆಯೇ ವಿಲೇವಾರಿ ಮಾಡಲಾಗುವುದು.

15) ಮೇಲೆ ತಿಳಿಸಿರುವ ಹರಾಜಿನ ದಿಸೆಯಿಂದ ಯಾವುದೇ ತರಹದ ವಾದ ವಿವಾದಗಳು ಉದ್ಭವಿಸಿದಲ್ಲಿ ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

16) ಇಚ್ಛೆಯುಳ್ಳ ಟೆಂಡರ್ / ಸವಾಲುದಾರರು ಹರಾಜು ಮಾಡಲಿರುವ ಅನುಪಯುಕ್ತ ಹಿತ್ತಾಳೆ ಮತ್ತು ಅಲ್ಯೂಮಿನಿಯಂ ಸಾಮಾಗ್ರಿಗಳನ್ನು ಯಥಾಸ್ಥಿತಿಯಲ್ಲಿ ಕಮಾಂಡೆಂಟ್‌ರವರ ಕಛೇರಿ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಈ ಘಟಕದ ಅಧೀನದಲ್ಲಿರುವ ರಾಜ್ಯ ಶಸ್ತ್ರಾಗಾರದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಕಮಾಂಡೆಂಟ್,

ಪಿ.ಆರ್. 229 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು-34.

## ಪ್ರಕಟಣೆ

## ಬೆಂಗಳೂರು ಮಹಾನಗರ ಪಾಲಿಕೆ

## ನಗರ ಪಾಲಿಕೆ ಕಛೇರಿಗಳು, ಎನ್.ಆರ್.ಚೌಕ. ಬೆಂಗಳೂರು

**ಅಧಿಸೂಚನೆ ಸಂಖ್ಯೆ : ಬಿ12(4) ಪಿ.ಆರ್: 321/03-04, ದಿನಾಂಕ: 5ನೇ ಏಪ್ರಿಲ್ 2006**

**ಗುತ್ತಿಗೆ ಆಧಾರದ ಮೇಲೆ ವಿವಿಧ ಹುದ್ದೆಗಳಿಗೆ ಅರ್ಜಿ ಅಹ್ವಾನ**

ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ಕೆಳಗೆ ನಮೂದಿಸಿರುವ 07 ವಿವಿಧ 'ಬಿ' ಮತ್ತು 'ಸಿ' ವೃಂದದ 226 ಖಾಲಿ ಹುದ್ದೆಗಳಿಗೆ ಗುತ್ತಿಗೆ ಅಧಾರದ ಮೇಲೆ ತಾತ್ಕಾಲಿಕವಾಗಿ 11 ತಿಂಗಳ ಅವಧಿಗೆ ಮಾತ್ರ ತುಂಬಲು ಕೆಳಗೆ ನಮೂದಿಸಿರುವ ಷರತ್ತುಗಳಿಗೆ ಒಳಗೊಂಡಂತೆ ಈ ಪ್ರಕಟಣೆ ಹೊರಡಿಸಲಾಗಿದೆ.ಈ ಪ್ರಯುಕ್ತ ಹುದ್ದೆಗಳ ಸಂಖ್ಯೆ ಕಡಿಮೆ ಅಥವಾ ಹೆಚ್ಚಾದಲ್ಲಿ, ನಗರ ಪಾಲಿಕೆಯ ಮಾನ್ಯ ಆಯುಕ್ತರವರಿಗೆ ಅಧಿಕಾರವಿರುತ್ತದೆ.

ದಿನಾಂಕ: 02-05-2006 ರಿಂದ ದಿನಾಂಕ: 31-05-2006ರ ವರೆಗೆ ಅಥವಾ ಅದಕ್ಕೂ ಮುಂಚಿತವಾಗಿ ಆಯುಕ್ತರು ಬೆಂಗಳೂರು ಮಹಾನಗರ ಪಾಲಿಕೆ ಕಛೇರಿ ಎನ್.ಆರ್.ಚೌಕ ಬೆಂಗಳೂರು-2 ಇವರಿಗೆ ತಲುಪುವಂತೆ ಈ ಕೆಳಗೆ ನಮೂದಿಸಿರುವ ಹುದ್ದೆಗಳಿಗೆ ಮತ್ತು ನೀಡಿರುವ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಎಲ್ಲಾ ಅಡಕಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ, ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ವಿದ್ಯಾರ್ಹತೆ | ಸಂಚಿತ ವೇತನ ರೂ ಗಳಲ್ಲಿ | ವಯೋಮಿತಿ |
|---|---|---|---|---|
| 1. | ಪ್ರಸೂತ್ತಿ ತಜ್ಞರು | ಎಂ.ಬಿ.ಬಿ.ಎಸ್, ಡಿ.ಜಿ.ಓ, ಭಾರತೀಯ ವೈದ್ಯಕೀಯ ಸಂಸ್ಥೆಯಿಂದ ಮಾನ್ಯತೆ ಪಡೆದು ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರಬೇಕು. | 13,000 | ಪ.ಜಾ/ಪ.ಪಂ. ಕನಿಷ್ಟ 18 ಗರಿಷ್ಟ 47 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 45 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 42 ವರ್ಷಗಳು |

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ವಿದ್ಯಾರ್ಹತೆ | ಸಂಚಿತ ವೇತನ ರೂ ಗಳಲ್ಲಿ | ವಯೋಮಿತಿ |
|---|---|---|---|---|
| 2. | ಸಹಾಯಕ ಶಸ್ತ್ರ ಚಿಕಿತ್ಸಕರು | ಎಂ.ಬಿ.ಬಿ.ಎಸ್ | 10,000 | ಪ.ಜಾ/ಪ.ಪಂ. ಕನಿಷ್ಟ 18 ಗರಿಷ್ಟ 47 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 45 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 42 ವರ್ಷಗಳು |
| 3. | ಸ್ಟಾಫ್ ನರ್ಸ್ | ಪಿ.ಯು.ಸಿ+3 ವರ್ಷ ನರ್ಸ್ ತರಬೇತಿ ಹೊಂದಿರಬೇಕು. (ಕರ್ನಾಟಕ ಸರ್ಕಾರದಿಂದ ಮಾನ್ಯತೆ ಪಡೆದಿರಬೇಕು) | 4,565 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| 4. | ಲೇಡಿ ಹೆಲ್ತ್ ವಿಸಿಟರ್ಸ್ (ಎಲ್.ಹೆಚ್.ವಿ) | ಎಸ್.ಎಸ್.ಎಲ್.ಸಿ + ಎಲ್.ಹೆಚ್.ವಿ ತರಬೇತಿಯಲ್ಲಿ ಉತ್ತೀರ್ಣತೆ ಹೊಂದಿರಬೇಕು. (ಕರ್ನಾಟಕ ಸರ್ಕಾರದಿಂದ ಮಾನ್ಯತೆ ಪಡೆದಿರಬೇಕು) | 4,140 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| 5. | ಎ.ಎನ್.ಎಂ. | ಎಸ್.ಎಸ್.ಎಲ್.ಸಿ + 18 ತಿಂಗಳು ಎ.ಎನ್.ಎಂ. ಕೋರ್ಸ್, (ಕರ್ನಾಟಕ ಸರ್ಕಾರದಿಂದ ಮಾನ್ಯತೆ ಪಡೆದಿರಬೇಕು) | 3,290 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| 6. | ಕಿರಿಯ ಆರೋಗ್ಯ ಪರಿವೀಕ್ಷಕರು | ಎಸ್.ಎಸ್.ಎಲ್.ಸಿ + ಕಿರಿಯ ಆರೋಗ್ಯ ಪರಿವೀಕ್ಷಕರು ತರಬೇತಿಯಲ್ಲಿ ಅಂಗೀಕೃತ ಸಂಸ್ಥೆಯಿಂದ ತರಬೇತಿಯನ್ನು ಪಡೆದಿರಬೇಕು. | 3,290 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| 7. | ಪ್ರೌಢ ಶಾಲಾ ಶಿಕ್ಷಕರು | ಪದವಿ ಮತ್ತು ಬಿ.ಎಡ್ | 4,565 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 1. ಸಹ ಶಿಕ್ಷಕರು ಕನ್ನಡ | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎ ಪದವಿಯಲ್ಲಿ ಕನ್ನಡ ಭಾಷೆಯನ್ನು ಐಚ್ಛಿಕ ವಿಷಯವನ್ನಾಗಿ ಓದಿರಬೇಕು ಮತ್ತು ಬಿಎಡ್ ಪದವಿ ಹೊಂದಿರಬೇಕು | 4,565 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 2. ಸಹ ಶಿಕ್ಷಕರು ತಮಿಳು | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎ ಪದವಿಯಲ್ಲಿ ತಮಿಳ್ ಭಾಷೆಯನ್ನು ಐಚ್ಛಿಕ ವಿಷಯವನ್ನಾಗಿ ಓದಿರಬೇಕು ಮತ್ತು ಬಿಎಡ್ಪದವಿ ಹೊಂದಿರಬೇಕು | 4,565 | ಪ.ಜಾ/ಪ.ಪಂ .ಪ್ರ-1 ಕನಿಷ್ಟ 18 ಗರಿಷ್ಟ 38 ವರ್ಷಗಳು<br>ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು<br>ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ವಿದ್ಯಾರ್ಹತೆ | ಸಂಚಿತ ವೇತನ ರೂ ಗಳಲ್ಲಿ | ವಯೋಮಿತಿ |
|---|---|---|---|---|
| | 3. ಸಹ ಶಿಕ್ಷಕರು ಹಿಂದಿ | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎ ಪದವಿಯಲ್ಲಿ ಹಿಂದಿ ಭಾಷೆಯನ್ನು ಐಚ್ಛಿಕ ವಿಷಯವನ್ನಾಗಿ ಓದಿರಬೇಕು ಮತ್ತು ಬಿಎಡ್ ಪದವಿ ಹೊಂದಿರಬೇಕು | 4,565 | ಪ.ಜಾ/ಪ.ಪಂ .ಪ್ರ–1 ಕನಿಷ್ಟ 18 ಗರಿಷ್ಟ 38 ವರ್ಷಗಳು ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 4. ಸಹ ಶಿಕ್ಷಕರು ಉರ್ದು | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎ ಪದವಿಯಲ್ಲಿ ಉರ್ದು ಭಾಷೆಯನ್ನು ಐಚ್ಛಿಕ ವಿಷಯವನ್ನಾಗಿ ಓದಿರಬೇಕು ಮತ್ತು ಬಿಎಡ್ ಪದವಿ ಪಡೆದಿರಬೇಕು | 4,565 | ಪ.ಜಾ/ಪ.ಪಂ .ಪ್ರ–1 ಕನಿಷ್ಟ 18 ಗರಿಷ್ಟ 38 ವರ್ಷಗಳು ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಠ 36 ವರ್ಷಗಳು ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 5. ಸಹ ಶಿಕ್ಷಕರು ಕಲೆ | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎ ಪದವಿ ಪಡೆದಿರಬೇಕು ಈ ಪದವಿ ಪರೀಕ್ಷೆಯಲ್ಲಿ ಇತಿಹಾಸ,ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ ರಾಜ್ಯ ಶಾಸ್ತ್ರ ಮತ್ತು ಸಮಾಜ ಶಾಸ್ತ್ರ ಇವುಗಳಲ್ಲಿ ಯಾವುದಾದರು ಎರಡು ವಿಷಯಗಳನ್ನು ಐಚ್ಛಿಕವಾಗಿ ಅಧ್ಯಯನ ಮಾಡಿರ ಬೇಕು ಮತ್ತು ಬಿ.ಎಡ್ ಪದವಿ ಪಡೆದಿರಬೇಕು | 4,565 | ಪ.ಜಾ/ಪ.ಪಂ .ಪ್ರ–1 ಕನಿಷ್ಟ 18 ಗರಿಷ್ಟ 38 ವರ್ಷಗಳು ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 6. ಸಹ ಶಿಕ್ಷಕರು ಪಿ..ಸಿ.ಎಂ | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ ಪದವಿ ಪಡೆದಿರಬೇಕು ಇದರಲ್ಲಿ (ಫಿಸಿಕ್ಸ್) ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ ವಿಷಯಗಳನ್ನು ಐಚ್ಛಿಕ ವಿಷಯವನ್ನಾಗಿ ಅಧ್ಯಾಯನ ಮಾಡಿರಬೇಕು ಮತ್ತು ಬಿ.ಎಡ್ ಪದವಿ ಪಡೆದಿರಬೇಕು | 4,565 | ಪ.ಜಾ/ಪ.ಪಂ .ಪ್ರ–1 ಕನಿಷ್ಟ 18 ಗರಿಷ್ಟ 38 ವರ್ಷಗಳು ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 7. ಸಹ ಶಿಕ್ಷಕರು ಸಿ.ಬಿ.ಜಡ್ | ಅಂಗಿಕೃತ ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ ಪದವಿ ಪಡೆದಿರಬೇಕು ಇದರಲ್ಲಿ ಸಿ.ಬಿ.ಜಡ್ ವಿಷಯಗಳನ್ನು ಐಚ್ಛಿಕ ವಿಷಯವನ್ನಾಗಿ ಅಧ್ಯಾಯನ ಮಾಡಿರಬೇಕು ಮತ್ತು ಬಿ.ಎಡ್ ಪದವಿ ಪಡೆದಿರಬೇಕು | 4,565 | ಪ.ಜಾ/ಪ.ಪಂ .ಪ್ರ–1 ಕನಿಷ್ಟ 18 ಗರಿಷ್ಟ 38 ವರ್ಷಗಳು ಹಿಂದುಳಿದ ವರ್ಗ ಕನಿಷ್ಟ 18ಗರಿಷ್ಟ 36 ವರ್ಷಗಳು ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |
| | 8. ದೈಹಿಕ ಶಿಕ್ಷಕರು ಗ್ರೇಡ್ II | ಎಸ್.ಎಸ್.ಎಲ್.ಸಿ / ಪಿ.ಯು.ಸಿ ತೇರ್ಗಡೆ ಹೊಂದಿರಬೇಕು ಸಿ.ಪಿ.ಇ.ಡಿ ಪದವಿ ಹೊಂದಿರಬೇಕು | 3,290 | ಪ.ಜಾ/ಪ.ಪಂ.ಪ್ರ–1 ಕನಿಷ್ಟ 18 ಗರಿಷ್ಟ 38 ವರ್ಷಗಳು ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು |

ಹುದ್ದೆಯ ಹೆಸರು ಮತ್ತು ವರ್ಗೀಕರಣ
ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ:20–06–95 ಮತ್ತು
ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಸೇನೆಮಿ 2002 ದಿನಾಂಕ:22–11–2002.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | | ಪ.ಜಾತಿ | | ಪ.ಪಂಗಡ | | ಸಾಮಾನ್ಯ | | ಪ್ರವರ್ಗ–1 | | ಪ್ರವರ್ಗ–2ಎ | | ಪ್ರವರ್ಗ–2ಬಿ | | ಪ್ರವರ್ಗ–3ಎ | | ಪ್ರವರ್ಗ–3ಬಿ | |
| 1. | ಪ್ರಸೂತಿ ತಜ್ಞರು (ಲೇಡಿ ಮೇಡಿಕಲ್ ಆಫೀಸರ್ಸ್) | 10 | 03 | 01 ಇ.ಮ<br>01 ಮ<br>01 ಗ್ರಾ.ಮ | 01 | 01<br>ಇ.ಮ | 00 | 00 | 01 | 01<br>ಇ.ಮ | 04 | 02 ಇ.ಮ<br>01 ಮ<br>01 ಗ್ರಾ.ಮ | 01 | 01<br>ಇ.ಮ | –– | ––– | –– | –––– |
| 2. | ಸಹಾಯಕ ಶಸ್ತ್ರ ಚಿಕಿತ್ಸಕರು | 36 | 07 | 03 ಇ<br>02 ಮ<br>02 ಗ್ರಾ | 02 | 01 ಇ<br>01 ಮ | 17 | 04 ಇ<br>05 ಮ<br>05 ಗ್ರಾ<br>01 ಮಾ.ಸೈ<br>01 ಕ.ಮಾ.ಅ<br>01 ಯೋ.ನಿ | 01 | 01 ಇ | 04 | 02 ಇ<br>01 ಮ<br>01 ಗ್ರಾ | 01 | 01 ಇ | 02 | 01 ಇ<br>01 ಮ | 02 | 01 ಇ<br>01 ಮ |
| 3. | ಸ್ಟಾಫ್ ನರ್ಸ್ ್ | 38 | 07 | 03 ಇ<br>02 ಮ<br>02 ಗ್ರಾ | 03 | 01 ಇ<br>01 ಮ<br>01 ಗ್ರಾ | 17 | 04 ಇ<br>05 ಮ<br>05 ಗ್ರಾ<br>01 ಮಾ.ಸೈ<br>01 ಕ.ಮಾ.ಅ<br>01 ಯೋ.ನಿ | 02 | 01 ಇ<br>01 ಮ | 09 | 03 ಇ<br>03 ಮ<br>03 ಗ್ರಾ | –– | –– | –– | –– | –– | –– |
| 4. | ಎ.ಎನ್.ಎಂ | 38 | 06 | 02 ಇ<br>02 ಮ<br>02 ಗ್ರಾ | 02 | 01 ಇ<br>01 ಮ | 19 | 04 ಇ<br>06 ಮ<br>05 ಗ್ರಾ<br>01 ಮಾ.ಸೈ<br>01 ಅಂ.ವಿ<br>01 ಯೋ.ನಿ<br>01 ಕ.ಮಾ.ಅ | 02 | 01 ಇ<br>01 ಮ | 05 | 02 ಇ<br>02 ಮ<br>01 ಗ್ರಾ | 02 | 01 ಇ<br>01 ಮ | 01 | 01 ಇ | 01 | 01 ಇ |
| 5. | ಲೇಡಿ ಹೆಲ್ತ್ ವಿಸಿಟರ್ಸ್ (ಎಲ್.ಹೆಚ್.ವಿ) | 16 | 03 | 01 ಇ<br>01 ಮ<br>01 ಗ್ರಾ | 01 | 01 ಇ | 08 | 03 ಇ<br>03 ಮ<br>02 ಗ್ರಾ | 01 | 01 ಇ | 02 | 01 ಇ<br>01 ಮ | 01 | 01 ಇ | –– | –– | –– | –– |
| 6. | ಕಿರಿಯ ಆರೋಗ್ಯ ಪರಿವೀಕ್ಷಕರು | 40 | 06 | 02 ಇ<br>02 ಮ<br>02 ಗ್ರಾ | 02 | 01 ಇ<br>01 ಮ | 20 | 04 ಇ<br>06 ಮ<br>05 ಗ್ರಾ | 02 | 01 ಇ<br>01 ಮ | 06 | 02 ಇ<br>02 ಮ<br>02 ಗ್ರಾ | 02 | 01 ಇ<br>01 ಮ | 01 | 01 ಇ | 01 | 01 ಇ |

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | | ಪ.ಜಾತಿ | | ಪ.ಪಂಗಡ | | ಸಾಮಾನ್ಯ | | ಪ್ರವರ್ಗ-1 | | ಪ್ರವರ್ಗ-2ಎ | | ಪ್ರವರ್ಗ-2ಬಿ | | ಪ್ರವರ್ಗ-3ಎ | | ಪ್ರವರ್ಗ-3ಬಿ | |
| | | | | | | | | 02 ಮಾ.ಸೈ<br>01 ಅಂ.ವಿ<br>01 ಯೋ.ನಿ<br>01 ಕ.ಮಾ.ಅ | | | | | | | | | | |
| 7. | ಪ್ರೌಢ ಶಾಲಾ ಶಿಕ್ಷಕರು | 48 | | | | | | | | | | | | | | | | |
| | 1. ಸಹ ಶಿಕ್ಷಕರು ಕನ್ನಡ | 05 | | | 01 | 01 ಇ | 02 | 01 ಇ<br>01 ಮಾ.ಸೈ | 01 | 01 ಇ | ---- | ------- | 01 | 01 ಇ | | | | |
| | 2. ಸಹ ಶಿಕ್ಷಕರು ತಮಿಳು | 08 | 01 | 01 ಇ | 01 | 01 ಇ | 04 | 02 ಇ<br>01 ಮ<br>01 ಗ್ರಾ | 01 | 01 ಇ | 01 | 01 ಇ | --- | ----- | --- | ----- | --- | --- |
| | 3. ಸಹ ಶಿಕ್ಷಕರು ಹಿಂದಿ | 05 | 01 | 01 ಗ್ರಾ | -- | ---- | 02 | 01 ಮ<br>01 ಮಾ.ಸೈ | -- | ----- | 01 | 01 ಇ | | | | | 01 | 01 ಅಂ.ವಿ |
| | 4. ಸಹ ಶಿಕ್ಷಕರು ಉರ್ದು | 01 | | | | | 01 | 01 ಮ | | | | | | | | | | |
| | 5. ಸಹ ಶಿಕ್ಷಕರು ಕಲೆ | 12 | 01 | 01 ಮ | 01 | 01 ಮ | 06 | 01 ಇ<br>02 ಮ<br>01 ಗ್ರಾ<br>01 ಮಾ.ಸೈ<br>01 ಅಂ.ವಿ | 01 | 01 ಮ | 02 | 01 ಇ<br>01 ಮ | -- | ----- | 01 | 01 ಮ | | |
| | 6. ಸಹ ಶಿಕ್ಷಕರು ಪಿ..ಸಿ.ಎಂ | 07 | 03 | 01 ಇ<br>01 ಮ<br>01 ಗ್ರಾ | 01 | 01 ಇ | 03 | 03 ಮಾ.ಸೈ | | | | | | | | | | |
| | 7. ಸಹ ಶಿಕ್ಷಕರು ಸಿ.ಬಿ.ಜಡ್ | 07 | 01 | 01 ಗ್ರಾ | -- | ---- | 04 | 01 ಇ<br>01 ಮ<br>01 ಗ್ರಾ<br>01 ಮಾ.ಸೈ | | | 01 | 01 ಮ | 01 | 01 ಇ | | | | |
| | 8. ದೈಹಿಕ ಶಿಕ್ಷಕರು ಗ್ರೇಡ್ II | 03 | 01 | 01 ಇ | 01 | 01 ಇ | 01 | 01 ಇ | | | | | | | | | | |

**ಷರತ್ತುಗಳು:**

1. ವೈದ್ಯರು ಎಂ.ಬಿ.ಬಿ.ಎಸ್. ಪದವಿಯಲ್ಲಿ ಉತ್ತೀರ್ಣರಾಗಿ ಹೌಸ್ ಮೆನ್ ಶೀಪ್ ಪೂರ್ತಿಗೊಳಿಸಿ ಕರ್ನಾಟಕ ವೈದ್ಯಕೀಯ ಮಂಡಳಿಯಲ್ಲಿ ಹೆಸರನ್ನು ನೊಂದಾಯಿಸಿರಬೇಕು.
2. ಈ ಅಧಿಸೂಚನೆ ಅಡಿ ನೇಮಕಗೊಂಡ ಅಭ್ಯರ್ಥಿಗಳನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ 11 ತಿಂಗಳ ಅವಧಿಗೆ ಸಂಚಿತ ವೇತನದ ಆಧಾರದ ಮೇಲೆ ಮಾತ್ರ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ನೇಮಿಸಲಾಗುತ್ತದೆ. ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಹುದ್ದೆಗಳ ಬಗ್ಗೆ ಖಾಯಂ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ.
3. ನೇಮಕಗೊಂಡ ಅಭ್ಯರ್ಥಿಗಳು ಗುತ್ತಿಗೆ ನೇಮಕಾತಿ ಷರತ್ತು ಮತ್ತು ನಿಭಂದನೆಗಳನ್ನು ಒಪ್ಪಿಕೊಂಡು ರೂ,100 ಮೌಲ್ಯದ ಛಾಪಕಾಗದದ ಮೇಲೆ ಮುಚ್ಚಳಿಕೆ ಪತ್ರವನ್ನು "ಆಯುಕ್ತರು ಬೆಂಗಳೂರು ಮಹಾನಗರ ಪಾಲಿಕೆ" ಬೆಂಗಳೂರು ರವರ ಹೆಸರಿನಲ್ಲಿ ಬರೆದು ನೀಡಬೇಕಾಗಿರುತ್ತದೆ. ಈ ಆಧಾರದ ಮೇಲೆ ನೇಮಕಗೊಂಡ ಆಭ್ಯರ್ಥಿಗಳು ಯಾವ ಕಾರಣಕ್ಕು ನ್ಯಾಯಾಲಯಕ್ಕೆ ಮೊರೆ ಹೋಗುವಂತಿಲ್ಲ .
4. ಅರ್ಜಿಗಳನ್ನು ಸಲ್ಲಿಸಲು ದಿನಾಂಕ: 02-05-2006 ರಿಂದ ಕೊನೆಯ ದಿನಾಂಕ:31-05-06 ರ ಸಂಜೆ 4-00 ಗಂಟೆಯ ವರೆಗೆ ಕೇಂದ್ರ ಕಛೇರಿಯಲ್ಲಿರುವ ರೆಕಾರ್ಡ್ ವಿಭಾಗದಲ್ಲಿ ಸ್ವೀಕರಿಸಲಾಗುವುದು.
5. ಅರ್ಜಿಯನ್ನು ಸಲ್ಲಿಸಿದ ಕೊನೆಯ ದಿನಾಂಕದಂದು ಸಂಬಂಧಿಸಿದ ಹುದ್ದೆಗಳ ಮುಂದೆ ನಮೂದಿಸಿರುವ ವಯೋಮಿತಿ ಮೀರಿರಬಾರದು.
6. ಅಭ್ಯರ್ಥಿಗಳಿಗೆ ಕನ್ನಡ ಭಾಷೆ ಜ್ಞಾನ ಕಡ್ಡಾಯವಾಗಿರುತ್ತದೆ.
7. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
8. ಒಂದಕ್ಕಿಂತ ಹೆಚ್ಚು ಹುದ್ದೆಗೆ ಅರ್ಜಿಯನ್ನು ಸಲ್ಲಿಸ ಬಯಸುವ ಅಭ್ಯರ್ಥಿಗಳು ಅಗತ್ಯ ದಾಖಲೆಗಳೊಂದಿಗೆ ಕ್ರಮಬದ್ದವಾಗಿ ಅರ್ಜಿಯನ್ನು ಸಲ್ಲಿಸ ತಕ್ಕದು. ಮತ್ತು ಪ್ರತ್ಯೇಕವಾಗಿ ಇತರೆ ಹುದ್ದೆಗೆ ಎಂದು ಸ್ಪಷ್ಟವಾಗಿ ನಮೂದಿಸಿ, ಪ್ರತ್ಯೇಕ ಹುದ್ದೆಗೆ, ಪ್ರತ್ಯೇಕ ಅರ್ಜಿಯನ್ನು ಸಲ್ಲಿಸತಕ್ಕದು.
9. ಅಭ್ಯರ್ಥಿಯು ತನ್ನ ಇತ್ತೀಚಿನ 3 ಪಾಸ್ ಪೋರ್ಟ್ ಸೈಜಿನ ಭಾವ ಚಿತ್ರಗಳನ್ನು ಒಂದನ್ನು ಅರ್ಜಿಯ ಬಲಗಡೆ ಮೇಲ್ ಭಾಗದಲ್ಲಿ ಅಂಟಿಸಬೇಕು. ಹಾಗೂ ಇನ್ನೆರಡು ಭಾವ ಚಿತ್ರಗಳನ್ನು ಒಂದು ಚಿಕ್ಕ ಲಕೋಟೆಯಲ್ಲಿಟ್ಟು ಅರ್ಜಿಗೆ ಪಿನ್ ಮಾಡಿರಬೇಕು.
10. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
11. ಅಭ್ಯರ್ಥಿಗಳು ಆಯ್ಕೆ ಬಗ್ಗೆ ಪ್ರಚಾರ ಮತ್ತು ಶಿಫಾರಸ್ಸು ಮಾಡಿದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
12. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
13. ಮೇಲಿನ ಹುದ್ದೆಗಳ ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು, ನೇಮಕಾತಿ ಪ್ರಾಧಿಕಾರಿಯಾದ ಆಯುಕ್ತರು, ಬೆಂ.ಮ.ಪಾ.ರವರು ಕಾಯ್ದಿರಿಸಿಕೊಂಡಿರುತ್ತಾರೆ.
14. ಅಭ್ಯರ್ಥಿಗಳು ನೇಮಕಗೊಂಡಲ್ಲಿ ಇಬ್ಬರು ಗೌರನ್ವಿತ ವ್ಯಕ್ತಿಗಳಿಂದ ನಡವಳಿಕೆ ಪತ್ರಗಳನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಕಛೇರಿಗೆ ಹಾಜರು ಪಡಿಸತಕ್ಕದ್ದು .
15. ಅರ್ಜಿಗಳ ಶುಲ್ಕ ಪ.ಜಾತಿ/ಪಂಗಡ ಮತ್ತು ಪ್ರ-1 ಅಭ್ಯರ್ಥಿಗಳಿಗೆ 125 ರೂಪಾಯಿಗೆ ಅರ್ಜಿ ಶುಲ್ಕವಾಗಿ ಬ್ಯಾಂಕ್ ಡಿ.ಡಿ. ಹಾಗೂ ಹಿಂದುಳಿದ ವರ್ಗ ಮತ್ತು ಸಾಮಾನ್ಯ ಅಭ್ಯರ್ಥಿಗಳಿಗೆ 200 ರೂಪಾಯಿಗೆ ಬ್ಯಾಂಕ್ ಡಿ.ಡಿ.ಯನ್ನು "ಆಯುಕ್ತರು" ಬೆಂಗಳೂರು ಮಹಾನಗರ ಪಾಲಿಕೆ ಎನ್.ಆರ್.ಚೌಕ. ಬೆಂಗಳೂರು-560002 ರವರ ಹೆಸರಿಗೆ ಪಡೆದು ಅರ್ಜಿ ಜೊತೆಗೆ ಸಲ್ಲಿಸಬೇಕು.
16. ಈ ಮೇಲ್ಕಂಡ ಎಲ್ಲಾ ಹುದ್ದೆಗಳಿಗೆ ಶೇಖಡ 60 ಕ್ಕೂ ಮೇಲ್ಪಟ್ಟ ಅಂಕಗಳು ಪಡೆದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸತಕ್ಕದು ಹಾಗೂ ಶೇಕಡ 60 ಕ್ಕಿಂತ ಕಡಿಮೆ ಅಂಕ ಗಳಿಸಿದ ಅಭ್ಯಥಿಗಳು ಅರ್ಜಿ ಸಲ್ಲಿಸಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

**17. ಮೀಸಲಾತಿ ಅಡಿಯಲ್ಲಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು ವರ್ಗದಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು.**

ಅ) ಪ.ಜಾ/ಪ.ಪಂ. ಮತ್ತು ಹಿ.ಪ್ರ-1ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ:ಎಸ್‌ಡಬ್ಲೂಡಿ 132 ಎಸ್ ಎ ಡಿ 97 ದಿನಾಂಕ:08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ-2(ಎ), 2(ಬಿ), 3(ಎ), ಮತ್ತು 3(ಬಿ)ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ:ಎಸ್ ಡಬ್ಲೂಡಿ 126 ಬಿಸಿಎ ದಿನಾಂಕ:13-02-2003 ರಂದು ಹೊರಡಿಸಿದ "ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000" ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಶೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು. | ನಮೂನೆ-ಡಿ (ನಿಯಮ 3ಎ) (2) (3). ಸರ್ಕಾರದ ಆದೇಶ ಸಂಖ್ಯೆ: ಎಸ್ ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ:08-02-2000. |

| | | |
|---|---|---|
| 2 | ಹಿಂದುಳಿದ ಪ್ರವರ್ಗ 1 ಕ್ಕೆ ಸೇರಿದ ಅಭ್ಯರ್ಥಿಗಳು. | ನಮೂನೆ–ಇ (ನಿಯಮ 3ಎ) (2) (3). ಸರ್ಕಾರದ ಆದೇಶ ಸಂಖ್ಯೆ: ಎಸ್ ಡಬ್ಲೂಡಿ 132 ಎಸ್ಎಡಿ 97 ದಿನಾಂಕ:08–02–2000. |
| 3 | ಹಿಂದುಳಿದ ಪ್ರವರ್ಗ 2ಎ,2ಬಿ,3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು. | ನಮೂನೆ–ಎಫ್ (ನಿಯಮ 3ಎ) (2) (3). ಸರ್ಕಾರದ ಆದೇಶ ಸಂಖ್ಯೆ: ಎಸ್ ಡಬ್ಲೂಡಿ 126 ಬಿಸಿಎ ದಿನಾಂಕ:13–02–2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರ ಚಾಲ್ತಿಯಲ್ಲಿರಬೇಕು. ಚಾಲ್ತಿಯಲ್ಲಿರದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

**ಆ) ವಿವಿಧ ಪ್ರವರ್ಗಗಳಿಗೆ ಇರುವ ಮೀಸಲಾತಿ ಅವಕಾಶಗಳು**

ವಿವಿಧ ಪ್ರವರ್ಗದಲ್ಲಿ ಮೀಸಲಾತಿ ಬಯಸುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ:ಸಕಿ 49 ಬಿಸಿಎ 95 ದಿನಾಂಕ:08–02–1995 ರಲ್ಲಿ ನಿಗದಿಪಡಿಸಿರುವ ನಮೂನೆಗಳಲ್ಲಿ ಜಾತಿ ಆದಾಯ ಪತ್ರಗಳನ್ನು ತಹಶೀಲ್ದಾರ್ ರವರಿಂದ ಪಡೆದು ಸಲ್ಲಿಸಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದ ಪೂರ್ವದಲ್ಲಿ ಪಡೆದಿರಬೇಕು. ಹಾಗೂ ಐದು ವರ್ಷಕ್ಕೆ ಮೀರಿರಬಾರದು.

1. ವಿವಿಧ ಪ್ರವರ್ಗಗಳಿಗೆ ಮೀಸಲಾತಿ ಬಯಸುವ ಅಭ್ಯರ್ಥಿಗಳು ಕೆಳಕಂಡಂತೆ ಮೀಸಲಾತಿ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.
2. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 1 ರಲ್ಲಿ ಜಾತಿ ಪ್ರಮಾಣ ಪತ್ರ ಸಲ್ಲಿಸಬೇಕು.
3. ಪ್ರವರ್ಗ–1 ರಲ್ಲಿ ಅಭ್ಯರ್ಥಿಗಳು ನಮೂನೆ 2 ರಲ್ಲಿ ಜಾತಿ ಪ್ರಮಾಣ ಪತ್ರ ಸಲ್ಲಿಸಬೇಕು.
4. ಪ್ರವರ್ಗ 2(ಎ). 2(ಬಿ), 3(ಎ), 3(ಬಿ), ಈ ಅಭ್ಯರ್ಥಿಗಳು ನಮೂನೆ 3 ರಲ್ಲಿ ಜಾತಿ ಪ್ರಮಾಣ ಪತ್ರ ಸಲ್ಲಿಸಬೇಕು.
5. ಸಾಮಾನ್ಯ ಅರ್ಹತಾ ಪ್ರವರ್ಗಕ್ಕೆ ಯಾವುದೇ ಪ್ರಮಾಣ ಪತ್ರ ಇರುವುದಿಲ್ಲ.

**18. ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದವರ ಅಭ್ಯರ್ಥಿ:–**

1) ಸರ್ಕಾರಿ ಆದೇಶ ಸಂಖ್ಯೆ; ಸಿಆಸುಇ 71 ಸೆನೆನಿ 2001 ದಿನಾಂಕ: 24–10–2002 ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ ಮತ್ತು ದೃಢೀಕೃತ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

**19. ಮಾಜಿ ಸೈನಿಕರು:–**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**20. ಅಂಗವಿಕಲ ಗುಂಪಿಗೆ ಕೆಳಗಿನವರು ನೇಮಕಾತಿಗೆ ಅರ್ಹರಾಗುತ್ತಾರೆ:**

ಅಂಗವಿಕಲ ಅಭ್ಯರ್ಥಿ ಎಂದರೆ,

(ಎ) 1) ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನೆಲನ್) ಅನ್ನು ಮೀರದಿರುವ ದೃಷ್ಠಿ ಸಾಮಾರ್ಥ್ಯ ಇರುವ ವ್ಯಕ್ತಿ.

2) 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೊನದವರೆಗೆ ವಿಸ್ತರಿಸುವ ದೃಷ್ಠಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.

3) ಸಂಪೂರ್ಣವಾಗಿ ದೃಷ್ಠಿ ಸಾಮರ್ಥ್ಯವನ್ನು ಕಳೆದುಕೊಂಡಿದ್ದವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

(ಬಿ) ಎಲ್ಲಾ ಸಂದರ್ಭಗಳಲ್ಲಿ ಜೋರಾಗಿ ಮಾತನಾಡುವುದು ಕೇಳಿಸುವ ಅಥವಾ ಅರ್ಥವಾಗದ ಅಥವಾ ಎರಡೂ ಕಿವಿಗಳ ಪೈಕಿ ಉತ್ತಮವಾದ ಕಿವಿಯ ಶ್ರವಣ ಶಕ್ತಿಯು 90 ಡೆಸಿಬಲ್ ಗಳಿಗೂ ಹೆಚ್ಚಿ ತಗ್ಗಿರುವ (ಅತ್ಯಂತ ಕಡಿಮೆ ಶ್ರವಣ ಶಕ್ತಿಯ) ಅಥವಾ ಎರಡೂ ಕಿವಿಗಳು ಶ್ರವಣ ಶಕ್ತಿಯನ್ನು ಕಳೆದುಕೊಂಡಿರುವ ವ್ಯಕ್ತಿ ಅಥವಾ ಜೀವನದ ಸಾಮಾನ್ಯ ಉದ್ದೇಶಗಳ ಸಂಬಂಧದಲ್ಲಿ ಶ್ರವಣೇಂದ್ರೀಯ ನಿಷ್ಕ್ರಿಯವಾಗಿದ್ದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

(ಸಿ) ಮೂಳೆಗಳು, ಮಾಂಸಖಂಡಗಳು ಮತ್ತು ಕೀಲುಗಳು ವಾಡಿಕೆಯ ಕಾರ್ಯನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ.

(ಇ) ದೈಹಿಕ ಅಂಗವಿಕಲತೆ ಒಳಪಡುವ ಅಭ್ಯರ್ಥಿಗಳು ಮೂಳೆ ತಜ್ಞ (ಆರ್ಥೋಪೆಡಿಕ್ ಸರ್ಜನ್) ರಿಂದ ದೈಹಿಕ ಅಂಗವಿಕಲತೆಯ ಮೌಲಿಕರಣವನ್ನು ಅಲ್ಮಿಕೊ ಕಾನ್‌ಪುರ್ (ಡಬ್ಲ್ಯೂ.ಎಚ್.ಓ. ಸ್ಯಾಂಡರ್‌ರ್ಡ) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.

**ಅಂಗವಿಕಲ ಅಭ್ಯರ್ಥಿಗಳು:**

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 07 ಸೇಸ್ಥೆಅ 94 ದಿನಾಂಕ:13–09–95 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು ಮತ್ತು ಅಂಗವಿಕಲತೆ ಪ್ರಮಾಣವು ಶೇ.40 ರಿಂದ 75

ಕ್ಕಿಂತ ಹೆಚ್ಚಾಗಿರಬಾರದು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**21. ಗ್ರಾಮೀಣ ಅಭ್ಯರ್ಥಿಗಳು :**

ಅ) ಸದರಿ ಅಧಿನಿಯಮದಲ್ಲಿ ಗ್ರಾಮೀಣ ಅಭ್ಯರ್ಥಿಯನ್ನು ಈ ಕೆಳಗೆ ಉದ್ಧರಿಸಿದಂತೆ

1. ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10 ನೇ ತರಗತಿವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ಧೃಡಿಕೃತ ಗ್ರಾಮೀಣ ಪತ್ರವನ್ನು ಲಗತ್ತಿಸ ತಕ್ಕದು.

21. ಎ) ಆಯ್ಕೆಗೊಂಡ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವಾಗ ಮೂಲ ದಾಖಲೆಗಳನ್ನು ಅಂದರೆ, ವಿದ್ಯಾರ್ಹತೆ ಅಂಕಪಟ್ಟಿ, ಜನ್ಮ ದಿನಾಂಕದ ರುಜುವಾತು ಪತ್ರ ಜಾತಿ ಆದಾಯ ಪತ್ರ,

**22. ಕನ್ನಡ ಮಾಧ್ಯಮದ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್ಆರ್ಆರ್ 2001 ದಿನಾಂಕ: 24-10-2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ (9) (1) (ಸಿ)ರ ಅನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

23. **ಈ ಷರತ್ತುಗಳು ಮೇಲ್ಕಂಡ ಎಲ್ಲಾ ಹುದ್ದೆಗಳಿಗೂ ಅನ್ವಯಿಸುತ್ತವೆ.**

ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ.

**ಅರ್ಜಿ ನಮೂನೆ**

**ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ 7 ವಿವಿಧ ವೃಂದದ ಹುದ್ದೆಗಳನ್ನು ಗುತ್ತಿಗೆ ಅಧಾರದ ಮೇಲೆ ತತ್ಕಾಲಿಕವಾಗಿ 11 ತಿಂಗಳ ಅವಧಿಗೆ ಸಂಚಿತ ವೇತನದ ಮೇಲೆ ನೇಮಾಕಾತಿ ಮಾಡಿಕೊಳ್ಳುವ ಬಗ್ಗೆ ಅರ್ಜಿ**

**ಬಿ12(6)ಪಿ.ಆರ್/23/06-07,ದಿನಾಂಕಃ 26.04.2006**

**ಭಾವ ಚಿತ್ರ**

**ಆಯುಕ್ತರವರ ಕಛೇರಿ**
**ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು**
**ಪ್ರಕಟಣೆ ಸಂಖ್ಯೆ :**
**ದಿನಾಂಕ ------- ರಂದು ನೀಡಿದ ಜಾಹೀರಾತಿಗನುಗುಣವಾಗಿ.**

1. ಯಾವ ಹುದ್ದೆಗಾಗಿ ಅರ್ಜಿ ಸಲ್ಲಿಸಿದೆ_______________
2. ಅರ್ಜಿದಾರನ/ಳ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ).-----------------
3. ತಂದೆ/ಪೋಷಕರ ಹೆಸರು _____________________
4. ಅಂಚೆ ವಿಳಾಸ -----------------
   ಖಾಯಂ ವಿಳಾಸ -----------------
5. ಹುಟ್ಟಿದ ತಾರೀಖು, ವಯಸ್ಸು ___________________
   (ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಲಗತ್ತಿಸಬೇಕು)
6. ಹುಟ್ಟಿದ ಸ್ಥಳ(ರಾಜ್ಯ, ಜಿಲ್ಲೆ, ತಾಲ್ಲೂಕು, ಪಟ್ಟಣ, ಗ್ರಾಮ)____________
7. ಪುರುಷರೇ/ಮಹಿಳೆಯರೇ
8. (ಅ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದವರೆ?-----------------
   (ಆ) ಹಿಂದುಳಿದ ವರ್ಗಗಳಿಗೆ ಸೇರಿದವರೇ?-----------------------
   (ಇ) ಯಾವ ಗುಂಪಿಗೆ ಸೇರಿದವರು?--------------------------
   (ಪ್ರಮಾಣ ಪತ್ರ ಲಗತ್ತಿಸಬೇಕು)--------------------------
   (ಈ) ಮಾಜಿ ಸೈನಿಕರೆ?-------------------------------
   (ಉ) ಗ್ರಾಮೀಣ ಅಭ್ಯರ್ಥಿಗಳೆ?--------------------------
   (ಊ) ಯೋಜನಾ ನಿರಾಶ್ರಿತರೆ?--------------------------
   **ಸೂಚನೆಃ** ಅ,ಆ,ಇ,ಈ,ಉ,ಊ ಗಳಿಗೆ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು.
   ಎಸ್.ಎಸ್.ಎಲ್.ಸಿ ಮತು ಪದವಿ ಮತ್ತು ಇತರೆ ಸಂಬಂಧಪಟ್ಟ ವಿದ್ಯಾರ್ಹತೆಗಳ 1 ನೇ ವರ್ಷದಿಂದ ಅಂತಿಮ ವರ್ಷದವರೆಗೆ (ಎಲ್ಲಾ ಸೆಮಿಸ್ಟರ್‌ಗಳ ಅಂಕ ಪಟ್ಟಿ ಲಗತ್ತಿಸಬೇಕು)
9. ವಿದ್ಯಾರ್ಹತೆ -------------ಒಟ್ಟು ಅಂಕ ----------- ಗಳಿಸಿದ ಅಂಕ ------ ಶೇಕಡಾ ಅಂಕ-----
10. ಬೆಂಗಳೂರು ಮಹಾನಗರ ಪಾಲಿಕೆ / ಸರ್ಕಾರಿ ಸಂಸ್ಥೆಯಲ್ಲಿ ಈ ಹಿಂದೆ ಯಾವುದಾದರೂ ಸೇವೆಯಲ್ಲಿದ್ದಲ್ಲಿ ಅದರ ಪೂರ್ಣ ವಿವರ_-----------ಮತ್ತು ಹುದ್ದೆಯಿಂದ ತೆಗೆದುಹಾಕಿದ್ದಲ್ಲಿ ಕಾರಣ___________________
11. ಇತ್ತೀಚೀನ ಪಾಸ್‌ಪೋರ್ಟ್ ಸೈಜಿನ ಫೋಟೋಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
    ಈ ಮೇಲ್ಕಂಡ ಎಲ್ಲಾ ವಿವರಗಳೂ ಸತ್ಯವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳಃ_______________________
ದಿನಾಂಕಃ ___________________ ಅರ್ಜಿದಾರನ/ಳ ಸಹಿ

ಪಿ.ಡಿ. 54

**ಪತ್ರಿಕಾ ಪ್ರಕಟಣೆ**

**ಬೆಂಗಳೂರು ಮಹಾನಗರ ಪಾಲಿಕೆ**

**ನಗರಪಾಲಿಕೆ ಕಛೇರಿಗಳು , ನರಸಿಂಹರಾಜ ಚೌಕ ,ಬೆಂಗಳೂರು –2**

**ಅಧಿಸೂಚನೆ ಸಂಖ್ಯೆ : ಬಿ12(6)ಪಿಆರ್:23/2006–07 ದಿನಾಂಕ 25ನೇ ಏಪ್ರಿಲ್ 2006**

**ಕಿರಿಯ ಅಭಿಯಂತರರ ಹುದ್ದೆಗಳಿಗೆ ಅರ್ಜಿ ಆಹ್ವಾನ**

ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ಕೆಳಗೆ ನಮೂದಿಸಿರುವ "ಸಿ" ವೃಂದದ 17 ಖಾಲಿ ಕಿರಿಯ ಅಭಿಯಂತರರ ಹುದ್ದೆಗಳಿಗೆ ಈ ಕೆಳಗೆ ನಮೂದಿಸಿರುವ ಷರತ್ತುಗಳಿಗೆ ಒಳಗೊಂಡಂತೆ ಈ ಪ್ರಕಟಣೆ ಹೊರಡಿಸಲಾಗಿದೆ. ಈ ಪ್ರಯುಕ್ತ ಹುದ್ದೆಗಳ ಸಂಖ್ಯೆ ಕಡಿಮೆ ಅಥವಾ ಹೆಚ್ಚಾದಲ್ಲಿ ನಗರ ಪಾಲಿಕೆಯ ಆಯುಕ್ತರವರಿಗೆ ಅಧಿಕಾರವಿರುತ್ತದೆ.

ದಿನಾಂಕಃ 31.05.2006 ರಂದು ಅಥವಾ ಅದಕ್ಕೂ ಮುಂಚಿತವಾಗಿ "ಆಯುಕ್ತರು" ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್.ಚೌಕ, ಬೆಂಗಳೂರು–560002 ಇವರಿಗೆ ತಲುಪುವಂತೆ ಈ ಕೆಳಗೆ ನಮೂದಿಸಿರುವ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಸಂಬಂಧಪಟ್ಟ ಎಲ್ಲಾ ಅಡಕಗಳೊಂದಿಗೆ ಭರ್ತಿಮಾಡಿದ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದೆ.

**ಹುದ್ದೆಯ ಹೆಸರುಃ–** ಕಿರಿಯ ಅಭಿಯಂತರರು

**ವಿದ್ಯಾರ್ಹತೆಃ** ಡಿಪ್ಲೊಮಾ ಇನ್ ಸಿವಿಲ್ / ಮೆಕ್ಯಾನಿಕಲ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ವಯೋಮಿತಿಃ** ಪ.ಜಾ/ಪ.ಪಂ,ಪ್ರವರ್ಗ–1ಃ ಕನಿಷ್ಟ 18 ಗರಿಷ್ಟ 38 ವರ್ಷಗಳು
ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು
ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು

**ವೇತನ ಶ್ರೇಣಿಃ** ರೂ–4575–8400

**ಒಟ್ಟು ಹುದ್ದೆಗಳು : 17,**

**ವರ್ಗೀಕರಣ**

| ಒಟ್ಟು ಹುದ್ದೆಗಳು | ಪ.ಜಾತಿ | | ಸಾ.ಅ | | ಪ್ರವರ್ಗ–1 | | ಪ್ರವರ್ಗ–2ಎ | | ಪ್ರವರ್ಗ–2ಬಿ | |
|---|---|---|---|---|---|---|---|---|---|---|
| 17 | 03 | 01 ಇ<br>01 ಮ<br>01 ಗ್ರಾ | 09 | 03 ಇ<br>03 ಮ<br>03 ಗ್ರಾ | 01 | 01 ಇ | 03 | 01 ಇ<br>01 ಮ<br>01 ಗ್ರಾ | 01 | 01 ಇ |

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:–**

1. ಮೇಲ್ಕಂಡ ಕಿರಿಯ ಅಭಿಯಂತರರ ಹುದ್ದೆಗಳಿಗೆ ಅರ್ಜಿಯನ್ನು ಸಲ್ಲಿಸಲು ದಿನಾಂಕ: 02–05–2006 ರಿಂದ ದಿನಾಂಕ: 31.05.2006ರ ವರೆಗೆ ಸಂಜೆ 4.00 ಘಂಟೆಯೊಳಗಾಗಿ ಅರ್ಜಿ ಸಲ್ಲಿಸತಕ್ಕದ್ದು.
2. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
3. ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್.ಚೌಕ, ಬೆಂಗಳೂರು5600 02 ಈ ವಿಳಾಸಕ್ಕೆ ಲಕೋಟೆಯ ಮೇಲೆ ಕಿರಿಯ ಅಭಿಯಂತರರ ಹುದ್ದೆಗೆ ಎಂದು ನಮೂದಿಸಿರಬೇಕು.
4. ನಿಗಧಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
5. ಅರ್ಜಿಯನ್ನು ಕಛೇರಿಯಲ್ಲಿ ಕಾರ್ಯ ನಿರ್ವಹಿಸುವ ದಿನಗಳಲ್ಲಿ ಬೆಳಿಗ್ಗೆ 10.30 ಘಂಟೆಯಿಂದ 4.00 ಘಂಟೆಯವರೆಗೆ ಕೇಂದ್ರ ಕಛೇರಿಯ ಆವರಣದಲ್ಲಿರುವ ರೆಕಾರ್ಡ್ ವಿಭಾಗದಲ್ಲಿ (ರಜಾದಿನಗಳನ್ನು ಹೊರತುಪಡಿಸಿ) ಸ್ವೀಕರಿಸಲಾಗುವುದು.
6. ಮೀಸಲಾತಿ ಸೌಲಭ್ಯ ಪಡೆಯಲಿಚ್ಛಿಸುವ ಗ್ರಾಮಾಂತರ ಅಭ್ಯರ್ಥಿಗಳು ಸರ್ಕಾರದ ಆದೇಶದ ಸಂಖ್ಯೆ ಸಿಆಸುಇ 97 ಸೇನೆನಿ 2002. ದಿನಾಂಕ: 22.11.2002ರ ಪ್ರಕಾರ ನಿಗಧಿಪಡಿಸಿದ ಅರ್ಜಿ ನಮೂನೆಯಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ 1ರಿಂದ 10 ನೇ ತರಗತಿ ವರೆಗೆ ವ್ಯಾಸಂಗ ಮಾಡಿದ ಧೃಡೀಕೃತ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸಬೇಕು.
7. ಯಾವುದಾದರು ಸರ್ಕಾರಿ ಇಲಾಖೆಯಲ್ಲಿ ಸೇವೆಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಬಯಸಿದರೆ ತಮ್ಮ ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿ ಸಲ್ಲಿಸಬೇಕು.
8. ಪ.ಜಾ/ಪ.ಪಂ. ಮತ್ತು ಹಿ.ಪ್ರ–1ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ:ಎಸ್‌ಡಬ್ಲೂಡಿ 132 ಎಸ್ ಎ ಡಿ 97 ದಿನಾಂಕ:08–02–2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ–2(ಎ), 2(ಬಿ), 3(ಎ), ಮತ್ತು 3(ಬಿ)ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ:ಎಸ್ ಡಬ್ಲೂಡಿ 126 ಬಿಸಿಎ ದಿನಾಂಕ:13–02–2003 ರಂದು ಹೊರಡಿಸಿದ "ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000" ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಶೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.
9. ಅಭ್ಯರ್ಥಿಯು ತನ್ನ ಇತ್ತೀಚಿನ ಮೂರು ಪಾಸ್‌ಪೋರ್ಟ್ ಸೈಜಿನ ಭಾವಚಿತ್ರಗಳಲ್ಲಿ ಒಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು ಹಾಗೂ ಇನ್ನೆರಡು ಭಾವಚಿತ್ರಗಳನ್ನು ಚಿಕ್ಕ ಲಕೋಟೆಯಲ್ಲಿಟ್ಟು ಅರ್ಜಿಗೆ ಪಿನ್ ಮಾಡಬೇಕು.

10. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅರ್ಜಿಗಳನ್ನು ತಿರಸ್ಕರಿಸಾಲಾಗುವುದು.
11. ಅರ್ಜಿದಾರರೊಡನೆ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.
12. ಮೇಲಿನ ಹುದ್ದೆಗಳ ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ ,ರವರು ಕಾಯ್ದಿರಿಸಿಕೊಂಡಿರುತ್ತಾರೆ.
13. ಈ ಮೇಲೆ ಸೂಚಿಸಿರುವ ಹುದ್ದೆಗೆ ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ ದೃಡೀಕರಿಸಿದ ಅಂಗೀಕೃತ ವಿಶ್ವವಿದ್ಯಾಲಯ/ ಸಂಸ್ಥೆಗಳಿಂದ ಪ್ರಮಾಣ ಪತ್ರಗಳನ್ನು ಹಾಗೂ ಎಲ್ಲಾ ವರ್ಷಗಳ ಅಂಕ ಪಟ್ಟಿಗಳನ್ನು ಲಗತ್ತಿಸಬೇಕು.(ಎಲ್ಲಾ ಸಂಬಂಧಪಟ್ಟ ನಕಲು ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ ದೃಡೀಕರಿಸಿರಬೇಕು)
14 ಆಯ್ಕೆಯಾದ ಪ.ಜಾತಿ ಮತ್ತು ಪ.ಪಂಗಡ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
15. ಅರ್ಜಿ ಸಲ್ಲಿಸುವಾಗ 50 ರೂಪಾಯಿ ಅರ್ಜಿ ಶುಲ್ಕ ಎಂದು ಬ್ಯಾಂಕ್ ಡಿ.ಡಿ ಮೂಲಕ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್. ಚೌಕ, ಬೆಂಗಳೂರು–560 002 ರವರ ಹೆಸರಿಗೆ ಪಡೆದು ಅರ್ಜಿಗೆ ಲಗತ್ತಿಸಿ ಸಲ್ಲಿಸಬೇಕು.
16. ಕಿರಿಯ ಅಭಿಯಂತರರ ಹುದ್ದೆಗೆ ಶೇಖಡ 60 ಕ್ಕೂ ಮೇಲ್ಪಟ್ಟ ಅಂಕಗಳು ಪಡೆದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸತಕ್ಕದು ಹಾಗೂ ಶೇಕಡ 60 ಕ್ಕಿಂತ ಕಡಿಮೆ ಅಂಕ ಗಳಿಸಿದ ಅಭ್ಯಥಿಗಳು ಅರ್ಜಿ ಸಲ್ಲಿಸಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ.

**ಅರ್ಜಿ ನಮೂನೆ**

**ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಕಿರಿಯ ಅಭಿಯಂತರರ ಹುದ್ದೆಗೆ ಅರ್ಜಿ**

**ಭಾವ ಚಿತ್ರ**

**ಆಯುಕ್ತರವರ ಕಛೇರಿ,**
**ಬೆಂಗಳೂರು ಮಹಾನಗರ ಪಾಲಿಕೆ,**
**ಪ್ರಕಟಣೆ ಸಂಖ್ಯೆ:**
**ದಿನಾಂಕ: ___________ರಂದು ಹೊರಡಿಸಿರುವ ಜಾಹಿರಾತಿಗನುಗುಣವಾಗಿ.**

1. ಅರ್ಜಿದಾರನ/ಳ ಪೂರ್ಣ ಹೆಸರು ...................................................... (ಬಿಡಿ ಅಕ್ಷರಗಳಲ್ಲಿ)
2. ತಂದೆ / ಪೋಷಕರ ಹೆಸರು ......................................................
3. ಪುರುಷರೆ / ಮಹಿಳೆಯರೆ ......................................................
4. ಖಾಯಂ ವಿಳಾಸ ......................................................
5. ಅಂಚೆ ವಿಳಾಸ. ......................................................
6. ಹುಟ್ಟಿದ ತಾರೀಖು, ವಯಸ್ಸು ............................... (ಎಸ್.ಎಸ್.ಎಲ್.ಸಿ ಅಂಕಪಟ್ಟಿ ಲಗತ್ತಿಸಬೇಕು)
7. ಹುಟ್ಟಿದ ಸ್ಥಳ (ರಾಜ್ಯ, ಜಿಲ್ಲೆ, ತಾಲ್ಲೂಕು, ಪಟ್ಟಣ, ಗ್ರಾಮ)
   (ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರೇ ......................................................
   (ಪ್ರಮಾಣ ಪತ್ರ ಲಗತ್ತಿಸಬೇಕು)
   (ಆ) ಸಾಮಾನ್ಯ ವರ್ಗಕ್ಕೆ ಸೇರಿದವರೇ ......................................................
   (ಇ) ಹಿಂದುಳಿದ ವರ್ಗಕ್ಕೆ ಸೇರಿದವರೇ ...................................................... (ಯಾವ ಗುಂಪು)
   (ಪ್ರಮಾಣ ಪತ್ರ ಲಗತ್ತಿಸಬೇಕು)
   (ಈ) ಗ್ರಾಮೀಣ ಅಭ್ಯರ್ಥಿಗಳೇ ......................................................
   **ಸೂಚನೆ:** ಅ.ಇ.ಈ ಗಳಿಗೆ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು.
8. ವಿದ್ಯಾರ್ಹತೆಗೆ ಸಂಬಂಧಪಟ್ಟ 1ನೇ ವರ್ಷದಿಂದ ಕೊನೆಯ ವರ್ಷದ ವರೆವಿಗೆ ಅಂಕಪಟ್ಟಿ ಲಗತ್ತಿಸಬೇಕು (ಎಲ್ಲಾ ಸೆಮಿಸ್ಟರ್‌ಗಳು)
9. ವಿದ್ಯಾರ್ಹತೆ ............................ ಒಟ್ಟು ಅಂಕ......................ಗಳಿಸಿದ ಅಂಕ .....................ಶೇಕಡಾ ಅಂಕ ....................................
10. ಬೆಂಗಳೂರು ಮಹಾನಗರ ಪಾಲಿಕೆ / ಸರ್ಕಾರಿ ಸಂಸ್ಥೆಯಲ್ಲಿ ಈ ಹಿಂದೆ ಯಾವುದಾದರೂ ಸೇವೆಯಲ್ಲಿದ್ದಲ್ಲಿ ಅದರ ಪೂರ್ಣ ವಿವರ ............................ ಮತ್ತು ಹುದ್ದೆಯಿಂದ ತೆಗೆದುಹಾಕಿದ್ದಲ್ಲಿ ಕಾರಣ ..........................................
11. ಇತ್ತೀಚಿನ ಪಾಸ್‌ಪೋರ್ಟ್ ಸೈಜಿನ ಪೋಟೋಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
    ಈ ಮೇಲ್ಕಂಡ ಎಲ್ಲಾ ವಿವರಗಳು ಸತ್ಯವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ: ...................................................... ಅರ್ಜಿದಾರನ/ಳ ಸಹಿ
ದಿನಾಂಕ: .............................................

ಪಿ.ಡಿ. 53

## ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ
## DEPARTMENT OF PRINTING STATIONERY AND PUBLICATIONS
### ಟೆಂಡರ್ ಅಧಿಸೂಚನೆ ಸಂಖ್ಯೆ: ಖರೀದಿ/ಪಿ-299/2006-07, ದಿನಾಂಕ: 29ನೇ ಏಪ್ರಿಲ್ 2006
### TENDER NOTIFICATION No.Pur/P-299/2006-07, Dated: 29th April 2006
### ವಿವಿಧ ಅಳತೆಯ ಪಿ.ಎಸ್. ಪ್ಲೇಟ್‌ಗಳ ಸರಬರಾಜಿಗಾಗಿ
### FOR THE SUPPLY OF VARIOUS SIZES OF P.S. PLATES

2006-07ನೇ ಸಾಲಿಗೆ ಸರ್ಕಾರಿ ಕೇಂದ್ರ ಮುದ್ರಣಾಲಯ ಮತ್ತು ಇದರ ಅಧೀನ ಕಾರ್ಯಾಲಯಗಳಿಗೆ ಮುದ್ರಣ ಕೆಲಸಕ್ಕೆ ಬೇಕಾಗುವ, ವಿವಿಧ ಅಳತೆಯ ಪಿ.ಎಸ್. ಪ್ಲೇಟ್‌ಗಳನ್ನು ಸರಬರಾಜು ಮಾಡುವ ಬಗ್ಗೆ ಇಚ್ಛೆಯುಳ್ಳ, ಕೆ.ಎಸ್.ಟಿ./ಸಿ.ಎಸ್.ಟಿ. ನೋಂದಾಯಿತ ತಯಾರಿಕಾ ಸಂಸ್ಥೆಗಳು ಮತ್ತು ಸರಬರಾಜುದಾರರಿಂದ ಮೊಹರಾದ ದರಪಟ್ಟಿಯ ಟೆಂಡರನ್ನು ಮಾದರಿಗಳ ಸಹಿತ ಕರೆಯಲಾಗಿದೆ. ನಿಗದಿತ ಟೆಂಡರ್ ನಮೂನೆಗಳನ್ನು (Tender Forms) ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಸರ್ಕಾರಿ ಮುದ್ರಣಾಲಯ ಪೀಣ್ಯ, ಬೆಂಗಳೂರು ಇಲ್ಲಿ ನಮೂನೆ ಶುಲ್ಕ ರೂ.2000/- (ಎರಡು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಟೆಂಡರ್ ಫಾರಂಗಳಿಗೆ ಅನ್ವಯಿಸುವ ತೆರಿಗೆ ಶೇ.12 1/2% ರಂತೆ ಒಟ್ಟು ರೂ.250/- (ಇನ್ನೂರ ಐವತ್ತು ರೂಪಾಯಿಗಳನ್ನು) ಮಾತ್ರ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಪೀಣ್ಯ, ಬೆಂಗಳೂರು ಇವರ ಹೆಸರಿಗೆ ಸಂದಾಯವಾಗುವಂತೆ ಡಿ.ಡಿ. ರೂಪದಲ್ಲಿ ನಗದು ಶಾಖೆಗೆ ಸಲ್ಲಿಸಿ ರಸೀದಿ ಮತ್ತು ಟೆಂಡರ್ ಫಾರಂಗಳನ್ನು ದಿನಾಂಕ: 30.05.2006 ರಂದು ಸಂಜೆ 4.30 ಒಳಗೆ ಖುದ್ದಾಗಿ ಪಡೆದುಕೊಳ್ಳಬಹುದಾಗಿದೆ. ವಿವಿಧ ಅಳತೆಯ ಪಿ.ಎಸ್. ಪ್ಲೇಟ್‌ಗಳ ವಿವರ ಮತ್ತು ಮಾದರಿಗಳ ಸಹಿತ ಹಾಗೂ ದಾಖಲಾತಿಗಳನ್ನು ಒಳಗೊಂಡ (ಟೆಕ್ನಿಕಲ್ ಬಿಡ್) ಮೊಹರಾದ ಟೆಂಡರ್ ಲಕೋಟೆ-I ನ್ನು, ಹಾಗೂ ಆರ್ಥಿಕ ಬಿಡ್ (ಫೈನಾನ್ಸಿಯಲ್ ಬಿಡ್) ಲಕೋಟೆ-II ನ್ನು ಪ್ರತ್ಯೇಕವಾಗಿ ದಿನಾಂಕ: 31.05.2006ರ ಸಂಜೆ 4.30 ಗಂಟೆಯವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಮೊಹರಾದ ಲಕೋಟೆ-I ರಲ್ಲಿ ರೂ.1,00,000/- ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿರ್ದೇಶಕರ ಹೆಸರಿಗೆ ಸಂದಾಯವಾಗುವಂತೆ ಪಡೆದು ಮೊಹರಾದ ಟೆಂಡರ್ ಲಕೋಟೆ-I ರಲ್ಲಿ ಲಗತ್ತಿಸಿರಬೇಕು. ಮೊಹರಾದ ಲಕೋಟೆ-Iನ್ನು ಹಾಜರಿರುವ ಟೆಂಡರ್‌ದಾರರ ಪ್ರತಿನಿಧಿಗಳ ಎದುರು ದಿನಾಂಕ: 01.06.2006 ರಂದು ಮಧ್ಯಾಹ್ನ 3.00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಷರತ್ತಿನ ಅನುಸಾರ ಇ.ಎಂ.ಡಿ. ಲಗತ್ತಿಸದ ಮತ್ತು ಟೆಂಡರ್ ನಿಯಮಗಳ ಪ್ರಕಾರ ದಾಖಲಾತಿಗಳನ್ನು ಒದಗಿಸದ ಹಾಗೂ ಮಾದರಿಗಳನ್ನು ಸಲ್ಲಿಸದ ಸಂಸ್ಥೆಯ ಟೆಂಡರ್‌ರನ್ನು ತಿರಸ್ಕರಿಸಲಾಗುವುದು. ಅರ್ಹ ಟೆಂಡರ್‌ದಾರರ ಲಕೋಟೆ-IIನ್ನು ತೆರೆಯುವ ಬಗ್ಗೆ ಪಿ.ಎಸ್. ಪ್ಲೇಟ್‌ಗಳ ಮಾದರಿಗಳನ್ನು ಈ ಇಲಾಖೆಯ ತಾಂತ್ರಿಕ ಸಮಿತಿಯ ಪರಿಶೀಲನೆಗೆ ಒಳಪಡಿಸಿದ ನಂತರ ಅರ್ಹ ಟೆಂಡರ್‌ದಾರರಿಗೆ ಮೂರು ದಿನ ಮುಂಚಿತವಾಗಿ ತಿಳಿಸಲಾಗುವುದು.

ಹೆಚ್ಚಿನ ಮಾಹಿತಿಯನ್ನು ಕಛೇರಿ ಕೆಲಸದ ದಿನಗಳಂದು ಕಛೇರಿ ಸಮಯದ ವೇಳೆಯಲ್ಲಿ ಪಡೆಯಬಹುದಾಗಿದೆ.

Sealed Tenders are invited from the intending registered Manufacturers and Suppiers for the Supply of various sizes of P.S. Plates for printing works to Govt. Central Press and its Branch Press. The Tender forms can be obtained from office of the Directorate of Printing Stationery and Publications Government Central Press Peenya Bangalore-58. In the cash section, by Paying an amount Rs.2000/ (Rupees Two thousand only) Plus 12 1/2% VAT of Rs.250/- by way of two separate DDs drawn if favour of Director Printing Stationery and Publications Bangalore on or before 30.05.2006 **In Person.** The seperate sealed Technical Bid (Documents) Cover I and Financial Bid Cover-II along with samples for each items shall reach to this office on or before 31.05.2006 before 4.30 P.M. Tenderers should enclose E.M.D. of Rs.1,00,000/- by way of Bank Demand Draft in Cover-I only, in favour of Director, Printing, Stationery & Publications, Bangalore. The Tenderer should submit their tender alongwith D.D., Documents and sample for each item. Otherwise your Quotation will be rejected outright. The Technical bid Cover-I will be opened in this office on 01.06.2006 at 3.00 P.M. In the presence of the representatives of the tenderer. The eligible Tenderers Financial Bid Cover-II will be opened after obtaining technical report of each P.S. Plates in the technical authority of this office. The date of opening Cover-II will be intimated in 3 days advance.

Any other information may be obtained from this office during the office working hours.

### TERMS AND CONDITIONS OF COVER-I

1) Copy of Registration Certificate under the Karnataka Sales Tax/VAT with copy of latest (November 2005) in (Prescribed form) for 2004-2005 monthly returns filed and including annual report with sales tax/VAT authorities to be furnished.

1) ಟೆಂಡರ್‌ದಾರರು, ಕರ್ನಾಟಕ ಮಾರಾಟ ತೆರಿಗೆ ನೋಂದಾಯಿತ ದೃಢೀಕರಣ ಪ್ರತಿ ಹಾಗೂ ನಿಗದಿತ ನಮೂನೆಯಲ್ಲಿ (ನವೆಂಬರ್ 2005ರ) ನವೀಕರಣ ಪ್ರತಿ (ಮಾಸಿಕ ತೆರಿಗೆ ಸಂದಾಯ ಪ್ರತಿ) ಗಳನ್ನು ವಾರ್ಷಿಕ ವರದಿಯೊಂದಿಗೆ ತೆರಿಗೆ ಅಧಿಕಾರಿಗಳಿಂದ ದೃಢೀಕರಿಸಿದ ಬಗ್ಗೆ ಪ್ರಮಾಣಪತ್ರವನ್ನು ಪಡೆದು ಲಗತ್ತಿಸಿರಬೇಕು.

2) Income Tax Returns filed along with acknowledgement for the past 3 years to be furnished (2002-2003, 2003-2004 and 2004-2005)

2) ಟೆಂಡರ್‌ದಾರರು ಈ ಹಿಂದಿನ 3 ವರ್ಷಗಳ (2002-2003, 2003-2004) ಮತ್ತು (2004-2005)ರ ಅವಧಿಯಲ್ಲಿ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ 2004-05ನೇ ಸಾಲಿನ ಆದಾಯ ತೆರಿಗೆ ಅಸೆಸ್‌ಮೆಂಟ್‌ನೊಂದಿಗೆ ತೆರಿಗೆ ಅಧಿಕಾರಿಗಳಿಂದ ಪಡೆದ ಸ್ವೀಕೃತಿ ಪತ್ರವನ್ನು ಪಡೆದು ಲಗತ್ತಿಸಿರಬೇಕು.

3) Audited balance sheet for the last 3 years in case of turn over of tenderer for more than 5 Lakhs (Rupees Five Lakhs Only) and in other cases the account duely certified by the chartered accountant to be furnished

3) ಟೆಂಡರ್‌ದಾರರು ಕಳೆದ 3 ವರ್ಷಗಳಲ್ಲಿ ಸಂಸ್ಥೆಯ ಲಾಭ ಮತ್ತು ನಷ್ಟಗಳ ಬಗ್ಗೆ ಲೆಕ್ಕ ಪರಿಶೋಧಕರಿಂದ ದೃಢೀಕರಣ ಪತ್ರ ಹಾಗೂ ರೂ.5 ಲಕ್ಷ ರೂಪಾಯಿಗಳಷ್ಟು ವಾರ್ಷಿಕ ವಹಿವಾಟು ಮಾಡಿರುವುದರ ಬಗ್ಗೆ ಚಾರ್ಟೆಡ್ ಅಕೌಂಟೆಂಟ್‌ರವರಿಂದ ಮಾಡಿಸಿದ ದೃಢೀಕರಣ ಪತ್ರ ಲಗತ್ತಿಸಿರಬೇಕು.

4) Tenderer should furnish interest free earnest money deposit of Rs.1,00,000/- (Rupees one lakh only) by way of Demand Draft in favour of the Director, Printing, Stationery and Publications, Bangalore-58 in Cover-I only, failing which a tender will be rejected outright and their bids will be returned.

4) ಟೆಂಡರ್‌ದಾರರು ತಮ್ಮ ದರಪಟ್ಟಿಯೊಂದಿಗೆ ಬಡ್ಡಿರಹಿತ ಭದ್ರತಾ ಠೇವಣಿ ರೂ.1,00,000/- (ಒಂದು ಲಕ್ಷ ರೂಪಾಯಿಗಳು ಮಾತ್ರ) ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು-58 ಇವರ ಹೆಸರಿಗೆ ಸಂದಾಯವಾಗುವಂತೆ ಪಡೆದು ಲಕೋಟೆ-I ರಲ್ಲಿಯೇ ಲಗತ್ತಿಸಿರಬೇಕು. ಡಿ.ಡಿ.ಯನ್ನು ಲಗತ್ತಿಸದ ಟೆಂಡರ್‌ನ್ನು ಸಾರಾಸಗಟಾಗಿ ತಿರಸ್ಕರಿಸಲಾಗುವುದು. ಮತ್ತು ಸದರಿಯವರ ಲಕೋಟೆ-II ತೆರೆಯದೆ ಹಿಂದಿರುಗಿಸಲಾಗುವುದು.

**TERMS AND CONDITIONS OF COVER-II**

1) The tenderer should quote the rate for each P.S. Plates along with sizes in prescribed Tender Form.

1) ಟೆಂಡರ್‌ದಾರರು ಪ್ರತಿ ಪಿ.ಎಸ್. ಪ್ಲೇಟ್‌ನ ಅಳತೆಗನುಗುಣವಾಗಿ ದರವನ್ನು ಪ್ರತ್ಯೇಕವಾಗಿ ನಿಗದಿತ ಟೆಂಡರ್ ನಮೂನೆಯಲ್ಲಿಯೇ ಸೂಚಿಸತಕ್ಕದ್ದು.

2) The sealed tender should be quoted in Cover-I and Cover-II "Quotations for the supply of Various sizes of P.S. Plates to Government Press" The sealed tender will be accepted in this office upto 4.30 pm on 31.5.2006 (both Cover-I and Cover-II). Cover-I will be opened in the presence of the representatives of the tenderers in this office on 01.06.2006 at 3.00 pm. Financial bid Cover-II will be opened after obtaining in the technical report in the technical authority of this office. The date opening Cover-II will be intimated in 3 days advance.

2) ಟೆಂಡರ್‌ದಾರರು ಮೊಹರು ಮಾಡಿದ ಲಕೋಟೆ-I ಮತ್ತು IIರ ಮೇಲೆ "ವಿವಿಧ ಅಳತೆಯ ಪಿ.ಎಸ್. ಪ್ಲೇಟ್‌ಗಳ ಸರಬರಾಜಿಗಾಗಿ" ಎಂದು ದಪ್ಪ ಅಕ್ಷರಗಳಲ್ಲಿ ನಿರ್ದಿಷ್ಟವಾಗಿ ನಮೂದಿಸಿರಬೇಕು. ಮೊಹರು ಮಾಡಿದ ಲಕೋಟೆ-I ಮತ್ತು II ನ್ನು ದಿನಾಂಕ: 31.05.2006 ರ ಸಂಜೆ 4.30ರ ವರೆಗೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ಸ್ವೀಕರಿಸಲಾಗುವುದು. ಮೊಹರಾದ ಲಕೋಟೆ-Iನ್ನು ದಿನಾಂಕ: 01.06.2006 ರಂದು ಮಧ್ಯಾಹ್ನ 3.00 ಗಂಟೆಗೆ ಹಾಜರಿರುವ ಪ್ರತಿನಿಧಿಗಳ ಮುಂದೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಅರ್ಹ ಟೆಂಡರ್‌ದಾರರ ಲಕೋಟೆ-II ನ್ನು ತೆರೆಯುವ ಬಗ್ಗೆ ಮಾದರಿಗಳನ್ನು ಈ ಇಲಾಖೆಯ ತಾಂತ್ರಿಕ ಅಧಿಕಾರಿಗಳ ಪರಿಶೀಲನೆಗೆ ಒಳಪಡಿಸಿದ ನಂತರ ಅರ್ಹ ಟೆಂಡರ್‌ದಾರರಿಗೆ 3 ದಿನ ಮುಂಚಿತವಾಗಿ ತಿಳಿಸಲಾಗುವುದು.

3) The rate quoted should be valid upto the end of financial year 2006-2007 or until further orders by the competent authority whichever is earlier.

3) ದರಪಟ್ಟಿಯಲ್ಲಿ ಸೂಚಿಸಿರುವ ದರಗಳು ಟೆಂಡರ್ ತೆರೆದ ದಿನಾಂಕದಿಂದ 1 ವರ್ಷದವರೆಗೆ ಅಂದರೆ 2006-2007ನೇ ಸಾಲಿನ ಆರ್ಥಿಕ ವರ್ಷದವರೆಗೆ ಅಥವಾ ಈ ಇಲಾಖೆಯ ಮುಂದಿನ ಆದೇಶದವರೆಗೆ ಸಿಂಧುತ್ವ ಹೊಂದಿರಬೇಕು.

4) The Director of Printing, Stationery and Publications reserves the right of accept or rejecting any tender for and on behalf of the Government of Karnataka without assigning any reasons so doing.

4) ಟೆಂಡರ್ ಯಾವುದೇ ಕಾರಣವನ್ನು ನೀಡದೆ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಇಲಾಖೆಯ ನಿರ್ದೇಶಕರದ್ದಾಗಿರುತ್ತದೆ. ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ.

5) The validity of rates quoted should be for one year, for any reasons and any circumstances rate quoted will not be changed.

5) ದರಪಟ್ಟಿಯಲ್ಲಿ ಸೂಚಿಸಿರುವ ದರಗಳು ಒಂದು ವರ್ಷದವರೆಗೆ ಸಿಂಧುತ್ವವನ್ನು ಹೊಂದಿರಬೇಕು. ಯಾವುದೇ ಸಂದರ್ಭದಲ್ಲಿ ಅಥವಾ ಸನ್ನಿವೇಶದಲ್ಲಿ ಬೆಲೆಗಳನ್ನು ಬದಲಾವಣೆ ಮಾಡಲು ಬರುವುದಿಲ್ಲ.

6) The suppliers fails to supply the P.S. Plates as per this office supply order. The security deposit of Rs.1,00,000/- (Rupees One lakh only) will be forfieted to Government Account and the firm name will be included in the black list of this office.

6) ಸರಬರಾಜುದಾರರು ಈ ಇಲಾಖೆಯಿಂದ ಸರಬರಾಜು ಆದೇಶ ಪಡೆದ ನಂತರ ನಿಗದಿತ ಸಮಯದಲ್ಲಿ ಪಿ.ಎಸ್. ಪ್ಲೇಟ್‌ಗಳನ್ನು ಸರಬರಾಜು ಮಾಡಬೇಕು. ತಪ್ಪಿದಲ್ಲಿ ಸದರಿಯವರ ಭದ್ರತಾ ಠೇವಣಿ ರೂ.1,00,000/- (ರೂ. ಒಂದು ಲಕ್ಷ ಮಾತ್ರ) ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಆ ಸಂಸ್ಥೆಯ ಹೆಸರನ್ನು ಇಲಾಖೆಯ ಕಪ್ಪುಪಟ್ಟಿಯಲ್ಲಿ ಸೇರಿಸಲಾಗುವುದು.

7) The supplier should be ready to supply P.S. Plates from ready stock and delivery Free on Road (FOR) destinations to Govt. Press Bangalore and its Branch Presses Dharwad, Gulbarga, Madikeri, Tumkur, Kolar, Shimoga and Mangalore.

7) ಸರಬರಾಜುದಾರರು ಪ್ರತಿ ಅಳತೆಯ ಪಿ.ಎಸ್. ಪ್ಲೇಟ್‌ಗಳ ಸಿದ್ದ ದಾಸ್ತಾನು ಹೊಂದಿದ್ದು ಕೂಡಲೇ ಸರಬರಾಜು ಮಾಡುವಂತಿರಬೇಕು. ಹಾಗೂ ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಮತ್ತು ಬೆಂಗಳೂರಿನ ಇತರೆ ಕಛೇರಿಗಳು ಮತ್ತು ಶಾಖಾ ಮುದ್ರಣಾಲಯಗಳಾದ ಧಾರವಾಡ, ಗುಲ್ಬರ್ಗ, ಮಡಿಕೇರಿ, ತುಮಕೂರು, ಕೋಲಾರ, ಶಿವಮೊಗ್ಗ ಮತ್ತು ಮಂಗಳೂರು ಇಲ್ಲಿಗೆ ಉಚಿತವಾಗಿ ತಲುಪುವಂತೆ (ಎಫ್.ಒ.ಆರ್. ಡಿಸ್ಟಿನೇಷನ್) ಸರಬರಾಜು ಮಾಡಬೇಕು.

8) Tenders should give the complete description of the P.S. Plates including brand makers name the unit of supply should be furnished in the quotations. Samples of each item should invariably sent along with quotations without samples., quotations are likely to be rejected. Samples will not be succeeded unless the brand name, manufacturers is subscribed on the samples. Samples are not returned at any circumstances.

8) ಟೆಂಡರ್‌ದಾರರು ಪ್ರತಿ ಪಿ.ಎಸ್. ಪ್ಲೇಟ್‌ಗಳ ಬ್ರಾಂಡಿನ ಹೆಸರು ಘಟಕ ಮತ್ತು ದರಗಳನ್ನು ಕಡ್ಡಾಯವಾಗಿ ದರಪಟ್ಟಿಯಲ್ಲಿ ನಮೂದಿಸಿರಬೇಕು. ಮತ್ತು ದರಪಟ್ಟಿಯೊಡನೆ ಪ್ರತಿ ವಸ್ತುವಿನ ಮಾದರಿಗಳನ್ನು ಕಡ್ಡಾಯವಾಗಿ ಕಳುಹಿಸಿರಬೇಕು. ಮಾದರಿಗಳನ್ನು ಕಳುಹಿಸದೆ ಇರುವ ದರಪಟ್ಟಿಗಳನ್ನು ಕಡ್ಡಾಯವಾಗಿ ತಿರಸ್ಕರಿಸಲಾಗುವುದು. ಹಾಗೂ ಪ್ರತಿ ವಸ್ತುವಿನ ಮಾದರಿಗಳ ಮೇಲೆ ವ್ಯಾಪಾರಿ ಸಂಸ್ಥೆ ಮತ್ತು ಮೊಹರು ಇತ್ಯಾದಿ ಇಲ್ಲದೆ ಇರುವ ದರಪಟ್ಟಿಗಳನ್ನು ತಿರಸ್ಕರಿಸಲಾಗುವುದು. ಮಾದರಿಗಳನ್ನು ಯಾವುದೇ ಕಾರಣದಿಂದಲೂ ಹಿಂದಿರುಗಿಸಲಾಗುವುದಿಲ್ಲ.

9) Successful tenderers should enter into agreement with this department regarding rates, terms and conditions on Stamp paper Rs.100/-

9) ವಿಜೇತ ಸರಬರಾಜುದಾರರು ತಾವು ಸರಬರಾಜು ಮಾಡುವ ವಸ್ತುಗಳ ಬಗ್ಗೆ, ದರಗಳು ಮತ್ತು ನಿಬಂಧನೆಗಳ ಬಗ್ಗೆ ರೂ.100/- ಛಾಪಾ ಕಾಗದದಲ್ಲಿ ಈ ಇಲಾಖೆಯೊಂದಿಗೆ ಒಪ್ಪಂದ ಮಾಡಿಕೊಳ್ಳತಕ್ಕದ್ದು.

10) Any other informations required may be obtained from this office during on any working days.

10) ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಯಾವುದೇ ಕೆಲಸದ ದಿವಸದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

Note: 1) All the certificates and documents must be furnished in the sealed cover-I only.

1) ಎಲ್ಲಾ ದಾಖಲಾತಿಗಳು ಮತ್ತು ಪ್ರಮಾಣ ಪತ್ರಗಳನ್ನು ಕಡ್ಡಾಯವಾಗಿ ಮೊಹರಾದ ಲಕೋಟೆ-I ರಲ್ಲಿ ಸಲ್ಲಿಸಿರಬೇಕು.

2) The Price quotations should be furnished in sealed cover-II only.

2) ದರಗಳಿಗೆ ಸಂಬಂಧಿಸಿದ ಕೊಟೇಷನ್‌ಗಳನ್ನು ಮೊಹರಾದ ಲಕೋಟೆ-II ರಲ್ಲಿ ಸಲ್ಲಿಸಿರಬೇಕು.

PR- 244 Director.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ
## ನೇಮಕಾತಿ ಆದೇಶ
### ಜಿಲ್ಲಾ ನೋಂದಣಾಧಿಕಾರಿಗಳು, ಬಳ್ಳಾರಿ ಇವರ ನಡವಳಿಗಳು

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬಳ್ಳಾರಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಸಿಬ್ಬಂದಿ:ಬ್ಯಾಕ್‌ಲಾಗ್:85:2001-02, ದಿನಾಂಕ: 31.12.2001.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
4) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 23.11.2004.
5) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ-45:2004-05, ದಿನಾಂಕ: 27.12.2004.
6) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 06.04.2006.

**ಪ್ರಸ್ತಾವನೆ:**

ಈ ಇಲಾಖೆಯ ಬಳ್ಳಾರಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬಳ್ಳಾರಿ ಜಿಲ್ಲೆ | ಒಂದು | ಎರಡು | ಮೂರು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (6)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ/45/2004-05/107, ದಿನಾಂಕ: 21ನೇ ಏಪ್ರಿಲ್ 2006**

ಉಲ್ಲೇಖ (5) ರ ಈ ಕಛೇರಿಯ ನೇಮಕಾತಿ ಆದೇಶವನ್ನು ಮುಂದುವರಿಸುತ್ತಾ, ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (6) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | ಸಂಜೀವ ಎಸ್. ಪಾಟೀಲ್ S/o ಶಂಕರ ನಾಯಕ ಶಿವನಾಯ್ಕ ಪಾಟೀಲ್, ಮು: ಪೋ: ಕುಲಿಗೋಡ ತಾ: ಗೋಕಾಕ, ಜಿ: ಬೆಳಗಾಂ-591250. | ST | 07.11.72 | 29.10.00 | S.S.L.C. 69.167 | ಉಪ ನೋಂದಣಿ ಕಛೇರಿ, ಕುರುಗೋಡು ಬಳ್ಳಾರಿ ಜಿಲ್ಲೆ | ಪರಿಶಿಷ್ಟ ಪಂಗಡ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ |
| 2 | ಪುಷ್ಪಲತಾ ಆರ್. W/o ಕೆ.ವಿ. ಶಿವಶಂಕರ, ಪ್ರ.ದ.ಸ. ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಕೆ.ಜಿ.ಐ.ಡಿ.) ಮಿನಿ ವಿಧಾನಸೌಧ, ತುಮಕೂರು-1 | ST | 02.03.72 | 30.06.05 | S.S.L.C. 66.500 | ಉಪ ನೋಂದಣಿ ಕಛೇರಿ, ಬಳ್ಳಾರಿ, ಬಳ್ಳಾರಿ ಜಿಲ್ಲೆ | ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 210407 ಏಪ್ರಿಲ್ 1989 (ವರ್ಷ)ರ ಪ್ರಕಾರ ಸಂಜೀವ ಎಸ್. ಪಾಟೀಲ್ ಇವರ ಜನ್ಮ ದಿನಾಂಕವು 07.11.1972 ಆಗಿರುತ್ತದೆ. ಹಾಗೂ S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 335623 ಏಪ್ರಿಲ್ 1987 (ವರ್ಷ)ರ ಪ್ರಕಾರ ಪುಷ್ಪಲತಾ ಆರ್. ಇವರ ಜನ್ಮ ದಿನಾಂಕವು 02.03.1972 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ

ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.

6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್ ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಬಳ್ಳಾರಿ ಜಿಲ್ಲೆ, ಬಳ್ಳಾರಿ.

ಪಿ.ಆರ್. 243

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪನಿರ್ದೇಶಕರ ಕಛೇರಿ, (ಲಾಲ್‌ಬಾಗ್ ಸಸ್ಯತೋಟ) ಲಾಲ್‌ಬಾಗ್, ಬೆಂಗಳೂರು

## ಸಂಕ್ಷಿಪ್ತ ಟೆಂಡರ್ ಆಹ್ವಾನ ಪ್ರಕಟಣೆ

**ಸಂಖ್ಯೆ: ತೋಉನಿ : ಲಾಸತೋ : ಬಿಜಿಟಿ : ಏನಿ1 : 128 : 2005-06, ದಿನಾಂಕ: 20ನೇ ಏಪ್ರಿಲ್ 2006.**

ಲಾಲ್‌ಬಾಗ್ ಸಸ್ಯತೋಟದಲ್ಲಿ ಹಾಲಿ ಚಾಲ್ತಿಯಲ್ಲಿರುವ ಕೊಳವೆ ಬಾವಿಗಳ ಮುಖಾಂತರ ಉದ್ಯಾನವನಗಳಿಗೆ ಮತ್ತು ಸಾರ್ವಜನಿಕರಿಗೆ ಕುಡಿಯುವ ನೀರು ಸರಬರಾಜು ಮಾಡುವುದು ಹಾಗೂ ಕಾರಂಜಿಗಳ ವಾರ್ಷಿಕ ನಿರ್ವಹಣೆಯನ್ನು ದಿನಾಂಕ: 1.6.2006 ರಿಂದ 31.5.2007 ರವರೆಗೆ ಗುತ್ತಿಗೆ ಆಧಾರದ ಮೇಲೆ ನಿರ್ವಹಿಸಲು ಕರ್ನಾಟಕ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಮತ್ತು ಆದಾಯ ತೆರಿಗೆ ಇಲಾಖೆಯಲ್ಲಿ ಅಧಿಕೃತ ನೊಂದಣಿ (ಪ್ಯಾನ್ ನಂಬರ್ಸ್) ಹೊಂದಿರುವ ಹಾಗೂ ಇದೇ ತರನಾದ ಕೆಲಸವನ್ನು ರಾಜ್ಯ ಸರ್ಕಾರ ಕೇಂದ್ರ ಸರ್ಕಾರದ ಇಲಾಖೆಯಲ್ಲಿ ವಾರ್ಷಿಕ ರೂ: 3.00 ಲಕ್ಷ ಮೌಲ್ಯದ ಕೆಲಸ ನಿರ್ವಹಿಸಿದ ಅನುಭವ ಹೊಂದಿರುವ ಕ್ಲಾಸ್-1 ವಿದ್ಯುತ್ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ದಿನಾಂಕ: 15.5.2006 ರಿಂದ 19.5.2006 ರವರೆಗೆ ರೂ - 500.00 ಗಳ ದರದಲ್ಲಿ ಮಾರಾಟ ಮಾಡಲಾಗುವುದು.

ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ: 22.5.2006 ರಂದು ಮಧ್ಯಾಹ್ನ 1.30 ಘಂಟೆಯ ಒಳಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳನ್ನು ತೋಟಗಾರಿಕೆ ಉಪನಿರ್ದೇಶಕರು ಲಾಲ್‌ಬಾಗ್ ಸಸ್ಯತೋಟ ರವರ ಕಛೇರಿಯಿಂದ ಪಡೆಯುವುದು.

ತೋಟಗಾರಿಕೆ ಉಪನಿರ್ದೇಶಕರು,

ಪಿ.ಆರ್. 238 ಲಾಲ್‌ಬಾಗ್ ಸಸ್ಯತೋಟ.

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಕೋಲಾರ ಅರಣ್ಯ ವಿಭಾಗ, ಕೋಲಾರ

## ಸಂಕ್ಷಿಪ್ತ ಹರಾಜು ಪ್ರಕಟಣೆ

**ಸಂಖ್ಯೆ. ಎ7. ಎಸ್‌ಎಎಸ್.ಸಿಆರ್. 4 / 06-07, ದಿನಾಂಕ: 06ನೇ ಮೇ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಅರಣ್ಯ ವಿಭಾಗದ ಕೆಳಕಂಡ ವಲಯದಲ್ಲಿ ನೀಲಗಿರಿ ನೆಡುತೋಪಿನಲ್ಲಿ ಕತ್ತಾವಣೆ ಮಾಡಿ ತಯಾರಿಸಿದ ನೀಲಗಿರಿ ಟಿಂಬರನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಈ ಕೆಳಕಂಡ ದಿನಾಂಕದಂದು ಹರಾಜು ಮಾಡಲಾಗುವುದು ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸತಕ್ಕದ್ದು.

**ಹರಾಜಿಟ್ಟಿರುವ ಮರಗಳ ವಿವರಗಳು**

| ಕ್ರ. ಸಂ. | ನಾಟಾ ಸಂಗ್ರಹಾಲಯದ ಹೆಸರು | ಹರಾಜಿನ ದಿನಾಂಕ ಮತ್ತು ಸಮಯ | ಹರಾಜು ಮಾಡುವ ಉತ್ಪನ್ನಗಳ ವಿವರ (ಘನ ಮೀ.ಗಳಲ್ಲಿ) |
|---|---|---|---|
| 1 | ಕೋಲಾರದ ಗಾಜಲದಿನ್ನೆ ಸಸ್ಯ ಕ್ಷೇತ್ರ ಚಿಂಕೆ ಡಿಪೋ | ದಿನಾಂಕ 21.06.2006, 12 ಘಂಟೆಗೆ | 145.26 |
| 2 | ಗೌರಿಬಿದನೂರು ವಲಯದ ಗೆದರೆ ಅರಣ್ಯ ಬೇವಿನಹಳ್ಳಿ ಬಳಿ ಟೆಂಕೆ ಡಿಪೋ | ದಿನಾಂಕ 23.06.2006, 12 ಘಂಟೆಗೆ | 209.09 |
| 3 | ಬಾಗೇಪಲ್ಲಿ ವಲಯದ ಕಣಿವೆ ನರ್ಸರಿ, ಪಾತಪಾಳ್ಯ | ದಿನಾಂಕ 26.06.2006, 12 ಘಂಟೆಗೆ | 50.503 |
| 4 | ಮಾಲೂರು ವಲಯದ ಸೊರಕಾಯಿಲಹಳ್ಳಿ ಜಿಂಕೆ ಪಾರ್ಕ್ | ದಿನಾಂಕ 28.06.2006, 12 ಘಂಟೆಗೆ | 19.648 |
| 5 | ಮಾಲೂರು ವಲಯದ ಲಕ್ಷ್ಮೀಸಾಗರ ಅರಣ್ಯ ರಕ್ಷಕರ ವಸತಿ ಗೃಹ ಹತ್ತಿರ | ದಿನಾಂಕ 29.06.2006, 12 ಘಂಟೆಗೆ | 15.888 |
| 6 | ಬಂಗಾರಪೇಟೆ ವಲಯ ಕಛೇರಿ ಅವರಣ, ಕಾರಬೆಲೆ ನರ್ಸರಿ | ದಿನಾಂಕ 30.06.2006 | 42.179 |

**ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರು ಹರಾಜು ಸುತ್ತಿನ ಬೆಲೆ ರೂ. 20000-00 ಗಳವರೆಗೆ ಕನಿಷ್ಠ ರೂ. 5000-00 ಮುಂಗಡ ಠೇವಣಿ ರೂ. 20000-00 ಮೀರಿದಲ್ಲಿ ರೂ. 20000-00 ಮುಂಗಡ ಠೇವಣಿ ಹಣವನ್ನು ಹರಾಜಿನಲ್ಲಿ ಭಾಗವಹಿಸುವ ಮೊದಲೇ ಕಟ್ಟತಕ್ಕದ್ದು.
2. ಹರಾಜು ಮುಗಿದ ಕೂಡಲೇ ಮಾರಾಟ ಬೆಲೆಯ ಶೇಕಡಾ 50 % ರಷ್ಟು ಹಣ ಮತ್ತು ಪೂರ್ತಿ ತೆರಿಗೆಗಳನ್ನು ಹರಾಜು ನಡೆದ ಸ್ಥಳದಲ್ಲಿಯೇ ಪಾವತಿಸಿ ರಸೀದಿ ಪಡೆಯತಕ್ಕದ್ದು. ಉಳಿಕೆ ಶೇ. 50 % ರಷ್ಟು ಹಣವನ್ನು ಮಾರಾಟ ದೃಡೀಕರಿಸಿದ ಮೇಲೆ ಪಾವತಿಸಿ ಕೆಲಸದ ಆದೇಶ ಪಡೆಯುವುದು.
3. ಹರಾಜನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ಅರಣ್ಯ ಇಲಾಖೆ ಪ್ರಾಧಿಕಾರವುಳ್ಳ ಅಧಿಕಾರಿಗಳವರ ವ್ಯಾಪ್ತಿಯಲ್ಲಿರುತ್ತದೆ.
4. ಹರಾಜು ಅಂಗೀಕಾರವಾದ 90 ದಿನಗಳಲ್ಲಿ ಟಿಂಬರನ್ನು ಸಾಗಿಸಿಕೊಳ್ಳತಕ್ಕದ್ದು. ತಪ್ಪಿದಲ್ಲಿ ನಷ್ಟಗಳಿಗೆ ಸವಾಲುದಾರರು ಜವಾಬ್ದಾರರಾಗಿರುತ್ತಾರೆ.
5. ಟಿಂಬರನ್ನು ಸೂಕ್ತ ರಹದಾರಿಯೊಂದಿಗೆ ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.

6. ನಿಗಧಿತ ವೇಳೆಯಲ್ಲಿ ಹಣ ಪಾವತಿಸದಿದ್ದಲ್ಲಿ, ಮೊದಲು ಪಾವತಿಸಿರುವ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸವಾಲುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ಇದರಿಂದ ಸರ್ಕಾರಕ್ಕೆ ಆಗುವ ನಷ್ಟವನ್ನು ಕಾನೂನು ರೀತ್ಯ ಬಾಕಿ ಕಂದಾಯವಾಗಿ ವಸೂಲಿ ಮಾಡಲಾಗುವುದು.
7. ಹರಾಜಿನಲ್ಲಿ ಭಾಗವಹಿಸುವ ಮೊದಲೇ ಬಿಡ್‌ದಾರರು ಟಿಂಬರನ್ನು ಪರಿಶೀಲಿಸಿರಬೇಕು.
8. ಹರಾಜು ಮಾಡುವ ಟಿಂಬರ್ ವಿವರಗಳನ್ನು ಸಂಬಂಧಪಟ್ಟ, ವಲಯ ಅರಣ್ಯಾಧಿಕಾರಿಯವರಿಂದ ಪಡೆದುಕೊಳ್ಳಬಹುದು.
9. ಹರಾಜಿಗಾಗಿ ಪ್ರಕಟಣೆಗೊಂಡಿರುವ ಮರಗಳ ಸಂಖ್ಯೆಯಾಗಲೀ ಅಥವಾ ಪರಿಮಾಣದಲ್ಲಾಗಲೀ ವ್ಯತ್ಯಾಸ ಕಂಡು ಬಂದ ಪಕ್ಷದಲ್ಲಿ ಈ ಇಲಾಖೆ ಜವಾಬ್ದಾರಿಯಿರುವುದಿಲ್ಲ. ಆದ್ದರಿಂದ ಬಿಡ್‌ದಾರರು ಹರಾಜಿನಲ್ಲಿಟ್ಟಿರುವ ಉತ್ಪನ್ನವನ್ನು ಹರಾಜಿಗೆ ಮುಂಚಿತವಾಗಿ ಪರೀಕ್ಷಿಸಿ, ಖಾತ್ರಿ ಮಾಡಿಕೊಂಡು ಹರಾಜಿನಲ್ಲಿ ಭಾಗವಹಿಸತಕ್ಕದ್ದು. ಸೊತ್ತುಗಳು ಹೇಗಿದೆಯೋ ಹಾಗೆ ಅದೇ ಸ್ಥಿತಿಯಲ್ಲಿ ಮಾರಾಟ ಮಾಡಲಾಗುವುದು.
10. ಹರಾಜಿನ ಮೊತ್ತಕ್ಕೆ ಶೇ. 12 % ರಷ್ಟು, ಅರಣ್ಯ ಅಭಿವೃದ್ಧಿ ತೆರಿಗೆ ಶೇ. 12.5 % ವುಡ್ ಆದಾಯ ತೆರಿಗೆ 2.5 % ಕ್ಕೆ ಸೇರಿಸಿ ಪಾವತಿ ಮಾಡಬೇಕು.
11. ಬ್ಲಾಕ್‌ಲಿಸ್ಟ್ ಆಗಿರುವವರು ಇನ್‌ಸಾಲ್‌ವೆಂಟ್ಸ್, ಮತ್ತು ಸುಸ್ತಿದಾರರು ಟೆಂಡರ್ ಅಥವಾ ಬಿಡ್‌ನಲ್ಲಿ ಭಾಗವಹಿಸಲು ಅರ್ಹರಲ್ಲ.
12. ಹರಾಜು ಮಾಡುವ ಅಥವಾ ಮಂಜೂರು ಮಾಡುವ ಪ್ರಾಧಿಕಾರವು ಹೆಚ್ಚಿನ ಬಿಡ್‌ನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಅಥವಾ ಎರಡನೇ ಹೆಚ್ಚುವರಿ ಬಿಡ್‌ನ್ನು ಅಂಗೀಕರಿಸುವ ಅಥವಾ ಪುನರ್ ಮಾರಾಟ ಮಾಡುವ ಹಕ್ಕನ್ನು ಹೊಂದಿರುತ್ತಾರೆ.
13. ಹೆಚ್ಚಿನ ವಿವರಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 249 ಕೋಲಾರ ವಿಭಾಗ, ಕೋಲಾರ.

**ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ದೊರೆಸಾನಿಪಾಳ್ಯ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76**

**ಹರಾಜು ಪ್ರಕಟಣೆ**

**ಸಂಖ್ಯೆ: ಎ2 : ಬಿಯುಡಿ : ಸಿಆರ್ : 41 : 2005-06, ದಿನಾಂಕ: 26ನೇ ಏಪ್ರಿಲ್ 2006**

**ವಿಷಯ :** ಸಂಶೋಧನಾ ವಲಯ ಅರಣ್ಯ ಅಧಿಕಾರಿಗಳು, ಹೊಸಕೋಟೆ, ಇಲ್ಲಿನ ನಳ್ಳಾಳ ಸಂಶೋಧನಾ ಕೇಂದ್ರಕ್ಕೆ ಸಂಬಂಧಿಸಿದ ನೀಲಗಿರಿ ಪೋಲ್ಸ್ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಹೊಸಕೋಟೆ ಸಂಶೋಧನಾ ವಲಯಕ್ಕೆ ಸಂಬಂಧಿಸಿದ ನಳ್ಳಾಳ ಕೇಂದ್ರದಲ್ಲಿನ ನೀಲಗಿರಿ ಪೋಲ್ಸ್ 2006-07ನೇ ಸಾಲಿಗೆ ದಿನಾಂಕ 30.5.2006 ರಂದು ಮಧ್ಯಾಹ್ನ 3.30 ಘಂಟೆಗೆ ಈ ಕಛೇರಿಯ ಹರಾಜು ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗಿನ ತಪ್ಶೀಲಿನಲ್ಲಿ ಸೂಚಿಸಿರುವ ನೀಲಗಿರಿ ಪೋಲ್ಸ್‌ನ್ನು ಹರಾಜಿನ ಮೂಲಕ ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು. ಇವರು ಅಥವಾ ಇವರಿಂದ ಅನುಮತಿಸಲ್ಪಟ್ಟ ಅಧಿಕಾರಿಗಳು ಮಾರಾಟ ಮಾಡುವರು. ಸದರಿ ದಿನಾಂಕದಂದು ಕಾರಣಾಂತರದಿಂದ ಹರಾಜು ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ: 02.06.2006 ರಂದು ಎರಡನೇ ಬಾರಿಗೆ ಮಾರಾಟ ಮಾಡುವರು. ಅರಣ್ಯ ಗುತ್ತಿಗೆದಾರರು ಭಾಗವಹಿಸಿ, ಹರಾಜಿನಲ್ಲಿ ಪಡೆಯಬಹುದು.

**ತಪ್ಶೀಲು**

| ಕ್ರ.ಸಂ. | ಸಂಶೋಧನಾ ವಲಯ ಹೆಸರು | ಮಾರಾಟ ಮಾಡುವ ಸ್ಥಳ | ಲಾಟ್ ಸಂಖ್ಯೆ | ವಸ್ತುಗಳ ವಿವರ ಮತ್ತು ಅಂದಾಜು ಪ್ರಮಾಣ | ಠೇವಣಿ ಹಣ ರೂ. | ಹರಾಜಿನ ದಿನಾಂಕ, ವೇಳೆ |
|---|---|---|---|---|---|---|
| 1 | 2 | 3 | | 4 | 5 | 6 |
| 1 | ಹೊಸಕೋಟೆ ಸಂಶೋಧನಾ ವಲಯದ ನಳ್ಳಾಳ ಸಂಶೋಧನಾ ಕೇಂದ್ರ | ಹೊಸಕೋಟೆ ಸಂಶೋಧನಾ ವಲಯಾರಣ್ಯ ಅಧಿಕಾರಿಗಳ, ಕಛೇರಿ ಹೊಸಕೋಟೆ | 1 | ನಳ್ಳಾಳ ಸಂಶೋಧನಾ ಕೇಂದ್ರ ನೀಲಗಿರಿ ಪೋಲ್ಸ್ 60 ಸೆ.ಮೀ. ಗಿಂತ ಮೇಲ್ಪಟ್ಟ 90 ಸೆ.ಮೀ. ರವರೆಗೆ 14 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |
| | | | 2 | 45 ಸೆ.ಮೀ. ಗಿಂತ ಮೇಲ್ಪಟ್ಟ 60 ಸೆ.ಮೀ. ರವರೆಗೆ 184 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |
| | | | 3 | 30 ಸೆ.ಮೀ. ಗಿಂತ ಮೇಲ್ಪಟ್ಟ 45 ಸೆ.ಮೀ. ರವರೆಗೆ 305 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |

| 1 | 2 | 3 | | 4 | 5 | 6 |
|---|---|---|---|---|---|---|
| | | | 4 | ನಳ್ಳಾಳ ಸಂಶೋಧನಾ ಕೇಂದ್ರ ನೀಲಗಿರಿ ಪೋಲ್ಸ್ 60 ಸೆ.ಮೀ. ಗಿಂತ ಮೇಲ್ಪಟ್ಟ 90 ಸೆ.ಮೀ. ರವರೆಗೆ 23 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |
| | | | 5 | 45 ಸೆ.ಮೀ. ಗಿಂತ ಮೇಲ್ಪಟ್ಟ 60 ಸೆ.ಮೀ. ರವರೆಗೆ 200 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |
| | | | 6 | 30 ಸೆ.ಮೀ. ಗಿಂತ ಮೇಲ್ಪಟ್ಟ 45 ಸೆ.ಮೀ. ರವರೆಗೆ 68 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |
| | | | 7 | 45 ಸೆ.ಮೀ. ಗಿಂತ ಮೇಲ್ಪಟ್ಟ 60 ಸೆ.ಮೀ. ರವರೆಗೆ 206 ಸಂಖ್ಯೆ | 2000/- | ದಿನಾಂಕ: 30.05.2006 ರಂದು ಮಧ್ಯಾಹ್ನ 3.30 ಘಂಟೆಗೆ |

ಹೆಚ್ಚಿನ ಮಾಹಿತಿಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ಷರತ್ತುಗಳು :**

1. ಆಸಕ್ತಿಯುಳ್ಳವರು ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ ಮಾರಾಟಕ್ಕಿರುವ ಅಂಶವನ್ನು ಅರಣ್ಯ ಸಂಪತ್ತಿಗೆ ಯಾವುದೇ ರೀತಿಯ ಹಾನಿಯುಂಟಾಗದಂತೆ ಎಚ್ಚರ ವಹಿಸಿ ವೀಕ್ಷಿಸಬಹುದು.
2. ಹರಾಜಿಗೆ ಮುಂಚೆ ಹರಾಜು ಪ್ರಕಟಣೆಗೆ ಸಹಿ ಮಾಡಿದವರನ್ನು ಹೊರತುಪಡಿಸಿ ಬೇರೆಯವರು ಹರಾಜಿಗೆ ಭಾಗವಹಿಸಲು ಸಾಧ್ಯವಾಗುವುದಿಲ್ಲ.
3. ಹರಾಜನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರ ಅರಣ್ಯ ಕೃಷಿಕರು, ಬೆಂಗಳೂರು ರವರು ಪಡೆದಿರುತ್ತಾರೆ.
4. ತಪಶೀಲಿನಲ್ಲಿ ಸೂಚಿಸಿದ ಅಂಶಗಳ ಸಂಚಕಾರ ಠೇವಣಿಯನ್ನು ನಗದು ರೂಪದಲ್ಲಿ ಪಾವತಿಸಿ, ಹರಾಜಿಗೆ ಮುಂಚಿತವಾಗಿ ಸಲ್ಲಿಸಬೇಕು.
5. ಬಂದ ದರಗಳಲ್ಲಿ ಅತೀ ಹೆಚ್ಚಿನ ದರವನ್ನು ಸಾಮಾನ್ಯವಾಗಿ ಅಂಗೀಕರಿಸಲಾಗುವುದು. ಒಂದೇ ದರವನ್ನು ಪ್ರಸ್ತಾಪಿಸಿದಲ್ಲಿ, ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡಲಾಗುವುದು. ಈ ಬಗ್ಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ನಿರ್ಧಾರ ಅಂತಿಮ ನಿರ್ಧಾರವಾಗಿರುತ್ತದೆ.
6. ವಿಜಯಿಯಾದ ಬಿಡ್ಡುದಾರರು ಮಾರಾಟ ಮುಗಿದ ನಂತರ ಮಾರಾಟದ ಪೂರ್ಣ ಮೊತ್ತ ಹಾಗೂ ಅನ್ವಯವಾಗುವ ಹಾಗೂ ಚಾಲ್ತಿಯಲ್ಲಿರುವ ಪೂರ್ತಿ ತೆರಿಗೆಗಳನ್ನು ಮಾರಾಟದ ದಿನದಂದು ಪಾವತಿಸತಕ್ಕದ್ದು.
7. ಹರಾಜಿನಲ್ಲಿ ಸಫಲರಾದವರು ಅವರು ಪಡೆದ ಅಂಶವನ್ನು ಅಂಗೀಕಾರ ಆದೇಶ ನೀಡಿದ ದಿನದಿಂದ ಒಂದು ವಾರದೊಳಗೆ ಯಥಾಸ್ಥಿತಿಯಲ್ಲಿ ತೆಗೆದುಕೊಂಡು ಹೋಗಬೇಕು. ಹರಾಜಿನ ನಂತರ ನೀವು ಪಡೆದ ಮಾಲಿನಲ್ಲಿ ವ್ಯತ್ಯಾಸ ಬಂದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ.
8. ಯಶಸ್ವಿ ಬಿಡ್ಡುದಾರರು ಸೂರ್ಯೋದಯದ ನಂತರ ಹಾಗೂ ಸೂರ್ಯಾಸ್ಥಮಾನಕ್ಕೆ ಮುಂಚೆ ಮಾರಾಟವಾದ ಅಂಶಗಳನ್ನು ಇಲಾಖಾ ರಹದಾರಿ ಮುಖಾಂತರ ಒಯ್ಯತಕ್ಕದ್ದು.
9. ಸಫಲರಾದ ಬಿಡ್ಡುದಾರರು ಮಾಲನ್ನು 30 ದಿವಸಗಳಲ್ಲಿ ಒಯ್ಯತಕ್ಕದ್ದು.
10. ಬಿಡ್ಡುದಾರರಿಗೆ ಮಾರಾಟ ಮಾಡಲಾದ ಸ್ವತ್ತುಗಳನ್ನಲ್ಲದೆ, ಇನ್ನಾವುದೇ ಅರಣ್ಯದ ಇತರೇ ಸ್ವತ್ತುಗಳನ್ನು ಯಶಸ್ವಿ ಬಿಡ್ಡುದಾರರು ಒಯ್ಯಬಾರದು.
11. ಈಗಾಗಲೇ ನೆಡುತೋಪು ನಿರ್ಮಾಣವಾಗಿದ್ದ ಸ್ಥಳಗಳಲ್ಲಿ ನೆಟ್ಟಿರುವ ಗಿಡಗಳಿಗೆ ಯಾವುದೇ ಹಾನಿಯಾಗದಂತೆ ಗುತ್ತಿಗೆದಾರರು ನೋಡಿಕೊಳ್ಳಬೇಕು. ಹಾನಿಯಾದಲ್ಲಿ ಗುತ್ತಿಗೆದಾರರು ನಷ್ಟ ಪರಿಹಾರವನ್ನು ಮತ್ತು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರು ವಿಧಿಸುವ ದಂಡವನ್ನು ಕಟ್ಟಬೇಕಾಗುತ್ತದೆ.

ಅರಣ್ಯ ಕೃಷಿಕರು,
ಕೇಂದ್ರ ವಲಯ, ಬೆಂಗಳೂರು.

ಪಿ.ಆರ್. 255

**ಬೆಂಗಳೂರು ಮಹಾನಗರ ಪಾಲಿಕೆ**

**ಪತ್ರಿಕಾ ಪ್ರಕಟಣೆ**

**ನಗರಪಾಲಿಕೆ ಕಛೇರಿಗಳು, ನರಸಿಂಹರಾಜ ಚೌಕ, ಬೆಂಗಳೂರು-2**

**ಅಧಿಸೂಚನೆ ಸಂಖ್ಯೆ : ಬಿ12(6)ಪಿಆರ್/29/06-07, ದಿನಾಂಕ: 04ನೇ ಮೇ 2006**

**ಕಂದಾಯ ವಸೂಲಿಗಾರರ / ಕಿರಿಯ ಅಭಿಯಂತರರು (ವಿದ್ಯುತ್) ಹುದ್ದೆಗಳಿಗೆ ಅರ್ಜಿ ಆಹ್ವಾನ**

ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ಕೆಳಗೆ ನಮೂದಿಸಿರುವ "ಸಿ"ವೃಂದದ 46 ಖಾಲಿ ಹುದ್ದೆಗಳಲ್ಲಿ 40 ಕಂದಾಯ ವಸೂಲಿಗಾರರು ಹಾಗೂ 06 ಕಿರಿಯ ಅಭಿಯಂತರರು (ವಿದ್ಯುತ್) ಹುದ್ದೆಗಳಿಗೆ ಈ ಕೆಳಗೆ ನಮೂದಿಸಿರುವ ಷರತ್ತುಗಳಿಗೆ ಒಳಗೊಂಡಂತೆ ಈ ಪ್ರಕಟಣೆ ಹೊರಡಿಸಲಾಗಿದೆ. ಈ ಪ್ರಯುಕ್ತ ಹುದ್ದೆಗಳ ಸಂಖ್ಯೆ ಕಡಿಮೆ ಅಥವಾ ಹೆಚ್ಚಾದಲ್ಲಿ ನಗರ ಪಾಲಿಕೆಯ ಆಯುಕ್ತರವರಿಗೆ ಅಧಿಕಾರವಿರುತ್ತದೆ.

ದಿನಾಂಕ : 08-06-2006 ರಂದು ಅಥವಾ ಅದಕ್ಕೂ ಮುಂಚಿತವಾಗಿ "ಆಯುಕ್ತರು" ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್.ಚೌಕ, ಬೆಂಗಳೂರು-560002 ಇವರಿಗೆ ತಲುಪುವಂತೆ ಈ ಕೆಳಗೆ ನಮೂದಿಸಿರುವ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಸಂಬಂಧಪಟ್ಟ ಎಲ್ಲಾ ಅಡಕಗಳೊಂದಿಗೆ ಭರ್ತಿಮಾಡಿದ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದೆ.

**ಹುದ್ದೆಯ ಹೆಸರು :-** 1) ಕಂದಾಯ ವಸೂಲಿಗಾರರು ಒಟ್ಟು ಹುದ್ದೆ-40

**ವಿದ್ಯಾರ್ಹತೆ :** ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

**ವೇತನ ಶ್ರೇಣಿ :** **ರೂ-3000-5450**

**ಹುದ್ದೆಯ ಹೆಸರು:-** 2) ಕಿರಿಯ ಅಭಿಯಂತರರು (ವಿದ್ಯುತ್) ಒಟ್ಟು ಹುದ್ದೆ-06

**ವಿದ್ಯಾರ್ಹತೆ :** ಡಿಪ್ಲೊಮೋ ಇನ್ ಎಲೆಕ್ಟ್ರಿಕಲ್ ಅಥವಾ ಸಾಮನಾಂತರದ ವಿದ್ಯಾರ್ಹತೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಮತ್ತು ಸರ್ಕಾರದ ಅಂಗೀಕೃತ ಸಂಸ್ಥೆಯಿಂದ ಮಾನ್ಯತೆ ಪಡೆದಿರಬೇಕು.

**ವೇತನ ಶ್ರೇಣಿ :** **ರೂ-4575-8400**

**ವಯೋಮಿತಿ :** ಪ.ಜಾ/ಪ.ಪಂ,ಪ್ರವರ್ಗ-1: ಕನಿಷ್ಟ 18 ಗರಿಷ್ಟ 38 ವರ್ಷಗಳು
ಹಿಂದುಳಿದ ವರ್ಗ ಕನಿಷ್ಟ 18 ಗರಿಷ್ಟ 36 ವರ್ಷಗಳು
ಸಾ.ಅ.ಕನಿಷ್ಠ 18 ವರ್ಷಗಳು ಗರಿಷ್ಠ 33 ವರ್ಷಗಳು

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:-**

1. ಮೇಲ್ಕಂಡ ಕಂದಾಯ ವಸೂಲಿಗಾರರು ಹಾಗೂ ಕಿರಿಯ ಅಭಿಯಂತರರು (ವಿದ್ಯುತ್) ಹುದ್ದೆಗಳಿಗೆ ಅರ್ಜಿಯನ್ನು ಸಲ್ಲಿಸಲು ದಿನಾಂಕ: 08-05-2006 ರಿಂದ ದಿನಾಂಕ: 08.06.2006ರ ವರೆಗೆ ಸಂಜೆ 4.00 ಘಂಟೆಯೊಳಗಾಗಿ ಅರ್ಜಿ ಸಲ್ಲಿಸತಕ್ಕದ್ದು.
2. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯವಾಗಿ ಕಡ್ಡಾಯವಾಗಿರುತ್ತದೆ.
3. ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್.ಚೌಕ, ಬೆಂಗಳೂರು5600 02 ಈ ವಿಳಾಸಕ್ಕೆ ಲಕೋಟೆಯ ಮೇಲೆ ಯಾವ ಹುದ್ದೆಗಾಗಿ ಅರ್ಜಿ ಸಲ್ಲಿಸಿದೆ ಎಂದು ನಮೂದಿಸಿರಬೇಕು.
4. ನಿಗಧಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
5. ಅರ್ಜಿಯನ್ನು ಕಛೇರಿಯಲ್ಲಿ ಕಾರ್ಯ ನಿರ್ವಹಿಸುವ ದಿನಗಳಲ್ಲಿ ಬೆಳಗ್ಗೆ 10.30 ಘಂಟೆಯಿಂದ 4.00 ಘಂಟೆಯವರೆಗೆ ಕೇಂದ್ರ ಕಛೇರಿಯ ಆವರಣದಲ್ಲಿರುವ ರೆಕಾರ್ಡ್ ವಿಭಾಗದಲ್ಲಿ (ರಜಾದಿನಗಳನ್ನು ಹೊರತುಪಡಿಸಿ) ಸ್ವೀಕರಿಸಲಾಗುವುದು.
6. ಮೀಸಲಾತಿ ಸೌಲಭ್ಯ ಪಡೆಯಬಚ್ಛಿಸುವ ಗ್ರಾಮಾಂತರ ಅಭ್ಯರ್ಥಿಗಳು ಸರ್ಕಾರದ ಆದೇಶದ ಸಂಖ್ಯೆ ಸಿಆಸುಇ 97 ಸೇನೆನಿ 2002. ದಿನಾಂಕ: 22.11.2002ರ ಪ್ರಕಾರ ನಿಗಧಿಪಡಿಸಿದ ಅರ್ಜಿ ನಮೂನೆಯಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ 1ರಿಂದ 10 ನೇ ತರಗತಿ ವರೆಗೆ ವ್ಯಾಸಂಗ ಮಾಡಿದ ಧೃಡೀಕೃತ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸಬೇಕು.
7. ಯಾವುದಾದರು ಸರ್ಕಾರಿ ಇಲಾಖೆಯಲ್ಲಿ ಸೇವೆಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಬಯಸಿದರೆ ತಮ್ಮ ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿ ಸಲ್ಲಿಸಬೇಕು.
8. ಪ.ಜಾ/ಪ.ಪಂ. ಮತ್ತು ಹಿ.ಪ್ರ-1ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ:ಎಸ್‌ಡಬ್ಲೂಡಿ 132 ಎಸ್ ಎ ಡಿ 97 ದಿನಾಂಕ:08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ-2(ಎ), 2(ಬಿ), 3(ಎ), ಮತ್ತು 3(ಬಿ)ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ:ಎಸ್ ಡಬ್ಲೂಡಿ 126 ಬಿಸಿಎ ದಿನಾಂಕ:13-02-2003 ರಂದು ಹೊರಡಿಸಿದ "ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000" ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಶೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

9. ಅಭ್ಯರ್ಥಿಯು ತನ್ನ ಇತ್ತೀಚಿನ ಮೂರು ಪಾಸ್‌ಪೋರ್ಟ್ ಸೈಜಿನ ಭಾವಚಿತ್ರಗಳಲ್ಲಿ ಒಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು ಹಾಗೂ ಇನ್ನೆರಡು ಭಾವಚಿತ್ರಗಳನ್ನು ಚಿಕ್ಕ ಲಕೋಟೆಯಲ್ಲಿಟ್ಟು ಅರ್ಜಿಗೆ ಪಿನ್ ಮಾಡಬೇಕು.
10. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
11. ಅರ್ಜಿದಾರರೊಡನೆ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.
12. ಮೇಲಿನ ಹುದ್ದೆಗಳ ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.
13. ಈ ಮೇಲೆ ಸೂಚಿಸಿರುವ ಹುದ್ದೆಗೆ ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ ದೃಢೀಕರಿಸಿದ ಅಂಗೀಕೃತ ವಿಶ್ವವಿದ್ಯಾಲಯ/ಸಂಸ್ಥೆಗಳಿಂದ ಪ್ರಮಾಣ ಪತ್ರಗಳನ್ನು ಹಾಗೂ ಎಲ್ಲಾ ವರ್ಷಗಳ ಅಂಕ ಪಟ್ಟಿಗಳನ್ನು ಲಗತ್ತಿಸಬೇಕು.(ಎಲ್ಲಾ ಸಂಬಂಧಪಟ್ಟ ನಕಲು ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿರಬೇಕು)
14. ಆಯ್ಕೆಯಾದ ಪ.ಜಾತಿ ಮತ್ತು ಪ.ಪಂಗಡ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
15. ಅರ್ಜಿ ಸಲ್ಲಿಸುವಾಗ 50 ರೂಪಾಯಿ ಅರ್ಜಿ ಶುಲ್ಕ ಎಂದು ಬ್ಯಾಂಕ್ ಡಿ.ಡಿ ಮೂಲಕ "ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ" ಎನ್.ಆರ್. ಚೌಕ, ಬೆಂಗಳೂರು-560 002 ರವರ ಹೆಸರಿಗೆ ಪಡೆದು ಅರ್ಜಿಗೆ ಲಗತ್ತಿಸಿ ಸಲ್ಲಿಸಬೇಕು.
16. ಕಂದಾಯ ವಸೂಲಿಗಾರರು ಹಾಗೂ ಕಿರಿಯ ಅಭಿಯಂತರರು (ವಿದ್ಯುತ್)' ಹುದ್ದೆಗೆ ಶೇಖಡ 50 ಕ್ಕೂ ಮೇಲ್ಪಟ್ಟ ಅಂಕಗಳನ್ನು ಪಡೆದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸತಕ್ಕದು ಹಾಗೂ ಶೇಕಡ 50 ಕ್ಕಿಂತ ಕಡಿಮೆ ಅಂಕ ಗಳಿಸಿದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

## ಅರ್ಜಿ ನಮೂನೆ

## ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಕಂದಾಯ ವಸೂಲಿಗಾರರು ಹಾಗೂ ಕಿರಿಯ ಅಭಿಯಂತರರು (ವಿದ್ಯುತ್) ಹುದ್ದೆಗೆ ಅರ್ಜಿ

**ಆಯುಕ್ತರವರ ಕಛೇರಿ,**
**ಬೆಂಗಳೂರು ಮಹಾನಗರ ಪಾಲಿಕೆ,**
**ಪ್ರಕಟಣೆ ಸಂಖ್ಯೆ:**
**ದಿನಾಂಕ:** _ _ _ _ _ _ _ _ _ _ _ **ರಂದು ಹೊರಡಿಸಿರುವ ಜಾಹಿರಾತಿಗನುಗುಣವಾಗಿ.**

ಭಾವ ಚಿತ್ರ

1. ಅರ್ಜಿದಾರನ/ಳ ಪೂರ್ಣ ಹೆಸರು ...................................................... (ಬಿಡಿ ಅಕ್ಷರಗಳಲ್ಲಿ)
2. ತಂದೆ / ಪೋಷಕರ ಹೆಸರು ......................................................
3. ಪುರುಷರೆ / ಮಹಿಳೆಯರೆ ......................................................
4. ಖಾಯಂ ವಿಳಾಸ ......................................................
5. ಅಂಚೆ ವಿಳಾಸ. ......................................................
6. ಹುಟ್ಟಿದ ತಾರೀಖು, ವಯಸ್ಸು ...............................(ಎಸ್.ಎಸ್.ಎಲ್.ಸಿ ಅಂಕಪಟ್ಟಿ ಲಗತ್ತಿಸಬೇಕು)
7. ಹುಟ್ಟಿದ ಸ್ಥಳ (ರಾಜ್ಯ, ಜಿಲ್ಲೆ, ತಾಲ್ಲೂಕು, ಪಟ್ಟಣ, ಗ್ರಾಮ)
8. (ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರೇ ......................................................
   (ಪ್ರಮಾಣ ಪತ್ರ ಲಗತ್ತಿಸಬೇಕು)
   (ಆ) ಸಾಮಾನ್ಯ ವರ್ಗಕ್ಕೆ ಸೇರಿದವರೇ ? ......................................................
   (ಇ) ಹಿಂದುಳಿದ ವರ್ಗಕ್ಕೆ ಸೇರಿದವರೇ ? ...................................................... (ಯಾವ ಗುಂಪು)
   (ಪ್ರಮಾಣ ಪತ್ರ ಲಗತ್ತಿಸಬೇಕು)
   (ಈ) ಗ್ರಾಮೀಣ ಅಭ್ಯರ್ಥಿಗಳೇ ? ......................................................
   **ಸೂಚನೆ:** ಅ.ಇ.ಈ ಗಳಿಗೆ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು.
9. ವಿದ್ಯಾರ್ಹತೆಗೆ ಸಂಬಂಧಪಟ್ಟ 1ನೇ ವರ್ಷದಿಂದ ಕೊನೆಯ ವರ್ಷದ ವರೆವಿಗೆ ಅಂಕಪಟ್ಟಿ ಲಗತ್ತಿಸಬೇಕು (ಎಲ್ಲಾ ಸೆಮಿಸ್ಟರ್‌ಗಳು)
10. ವಿದ್ಯಾರ್ಹತೆ ............................ ಒಟ್ಟು ಅಂಕ......................ಗಳಿಸಿದ ಅಂಕ ..................... ಶೇಕಡಾ ಅಂಕ ................................
11. ಬೆಂಗಳೂರು ಮಹಾನಗರ ಪಾಲಿಕೆ / ಸರ್ಕಾರಿ ಸಂಸ್ಥೆಯಲ್ಲಿ ಈ ಹಿಂದೆ ಯಾವುದಾದರೂ ಸೇವೆಯಲ್ಲಿದ್ದಲ್ಲಿ ಅದರ ಪೂರ್ಣ ವಿವರ ............................ ಮತ್ತು ಹುದ್ದೆಯಿಂದ ತೆಗೆದುಹಾಕಿದ್ದಲ್ಲಿ ಕಾರಣ ....................................................................
12. ಇತ್ತೀಚಿನ ಪಾಸ್‌ಪೋರ್ಟ್ ಸೈಜಿನ ಫೋಟೋಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

ಈ ಮೇಲ್ಕಂಡ ಎಲ್ಲಾ ವಿವರಗಳು ಸತ್ಯವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ: ........................................................

ದಿನಾಂಕ: ............................................. ಅರ್ಜಿದಾರನ/ಳ ಸಹಿ

ಆಯುಕ್ತರು

ಬೆಂಗಳೂರು ಮಹಾನಗರ ಪಾಲಿಕೆ.

**ಒಟ್ಟು ಹುದ್ದೆಗಳು : 46**

**ಹುದ್ದೆಗಳ ವರ್ಗೀಕರಣ**

| ಹುದ್ದೆಯ ಹೆಸರು | ಪ. ಜಾತಿ | | ಪ. ಪಂಗಡ | | ಸಾ.ಅ | | ಪ್ರವರ್ಗ–1 | | ಪ್ರವರ್ಗ–2ಎ | | ಪ್ರವರ್ಗ–2ಬಿ | | ಪ್ರವರ್ಗ–3ಎ | | ಪ್ರವರ್ಗ–3ಬಿ | |
|---|---|---|---|---|---|---|---|---|---|---|---|---|---|---|---|---|
| ಕಂದಾಯ ವಸೂಲಿಗಾರರು ಒಟ್ಟು ಹುದ್ದೆಗಳು: 40 | 06 | 02 ಇ<br>02 ಮ<br>02 ಗ್ರಾ | 02 | 01 ಇ<br>01 ಮ | 20 | 04 ಇ<br>06 ಮ<br>05 ಗ್ರಾ<br>02 ಮಾ.ಸೈ<br>01 ಕ.ಮಾ.ಅ<br>01 ಅ.ವಿ<br>01 ಯೋ.ನಿ | 02 | 01 ಇ<br>01 ಮ | 06 | 02 ಇ<br>02 ಮ<br>02 ಗ್ರಾ | 02 | 01 ಇ<br>01 ಮ | 01 | 01 ಇ | 01 | 01 ಇ |
| ಕಿರಿಯ ಅಭಿಯಂತರರು (ವಿದ್ಯುತ್) ಒಟ್ಟು ಹುದ್ದೆಗಳು: 06 | 01 | 01 ಇ | 01 | 01 ಇ | 03 | 01 ಇ<br>01 ಮ<br>01 ಗ್ರಾ | 01 | 01 ಇ | -- | -- | -- | -- | - | -- | - | -- |

ಆಯುಕ್ತರು

ಪಿ.ಡಿ. 58 ಬೆಂಗಳೂರು ಮಹಾನಗರ ಪಾಲಿಕೆ.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು.**

**ಸಂಖ್ಯೆ:ತೋಉನಿ:ಕಉ:ವಿನಿ2:7:06-07, ದಿನಾಂಕ:3ನೇ ಮೇ 2006**

**ವಿಷಯ:** ಇಂದಿರಾಗಾಂಧಿ ಸಂಗೀತ ಕಾರಂಜಿ ಉದ್ಯಾನವನದ ಕಾರಂಜಿ ಚಾಲನೆ ಮತ್ತು ನಿರ್ವಹಣೆ ಬಗ್ಗೆ ಟೆಂಡರ್ ಪ್ರಕಟಣೆ.

ಇಂದಿರಾಗಾಂಧಿ ಸಂಗೀತ ಕಾರಂಜಿ ಉದ್ಯಾನವನದ ಸಂಗೀತ ಕಾರಂಜಿಯ ಚಾಲನೆ ಮತ್ತು ನಿರ್ವಹಣೆಯನ್ನು ದಿನಾಂಕ:1.12.2006 ರಿಂದ 30.11.2007 ರವರೆಗೆ ಒಂದು ವರ್ಷದ ಅವಧಿಗೆ ನಿರ್ವಹಣೆ ಮಾಡಲು ಪರಿಣಿತ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ಅಧಿಕೃತ ಸಂಸ್ಥೆಯವರು ಈ ಕೆಳಗೆ ಸೂಚಿಸಿದ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿದಲ್ಲಿ ಟೆಂಡರ್‌ನಲ್ಲಿ ಭಾಗವಹಿಸುವುದು .

**ಟೆಂಡರ್ ಪ್ರಕಟಣೆಯ ವಿವರಗಳು**

1. ನಿಗದಿತ ಟೆಂಡರ್ ಫಾರಂ ಬೆಲೆ — ರೂ.500=00
2. ಟೆಂಡರ್ ಫಾರಂನ್ನು ಈ ಕಛೇರಿಯಿಂದ ಪಡೆಯುವ ಅವಧಿ — ದಿನಾಂಕ:1.7.2006 ರಿಂದ 05.7.2006 ರವರೆಗೆ
3. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಈ ಕಛೇರಿಯಿಂದ ಸ್ವೀಕರಿಸಲು ಕೊನೆಯ ದಿನಾಂಕ — 6.7.2006, ಸಂಜೆ 4.00 ಗಂಟೆವರೆಗೆ
4. ಮೊಹರಾದ ಟೆಂಡರ್ ಫಾರಂಗಳನ್ನು ತೆರೆಯುವ ದಿನಾಂಕ (ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ) — 6.7.2006 ರಂದು ಸಂಜೆ 5.00 ಗಂಟೆಗೆ
5. ಟೆಂಡರ್‌ನ್ನು ಸಲ್ಲಿಸಲು ನೀಡಬೇಕಾದ ಠೇವಣಿ (ಭದ್ರತಾ ಠೇವಣಿ) — ರೂ.70,000=00 (ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡ್‌ನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ

ನಿಗಧಿತ ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

ತೋಟಗಾರಿಕೆ ಉಪ ನಿರ್ದೇಶಕರು

ಕಬ್ಬನ್ ಉದ್ಯಾನವನ, ಬೆಂಗಳೂರು.

**ಟೆಂಡರ್ ಷರತ್ತು ಮತ್ತು ನಿಬಂಧನೆಗಳು:**

1. **ತಾಂತ್ರಿಕ ವಿಶಿಷ್ಟತೆಗಳ ವಿವರ**:- ಬಿಡ್ಡುದಾರರು ಸಾಫ್ಟವೇರ್ ತಂತ್ರಜ್ಞಾನದ ಜೊತೆಗೆ ಐ.ಟಿ ಸೇವೆಗಳಲ್ಲಿ ಉತ್ತಮ ನಿರ್ವಹಣೆ, ನಿಪುಣತೆಯುಳ್ಳ ದಾಖಲೆಗಳನ್ನು ಹೊಂದಿರಬೇಕು. ಗಣಕ ಯಂತ್ರ ಚಾಲಿತ ಸಂಗೀತ ಕಾರಂಜಿಯನ್ನು ನಿಯಂತ್ರಿಸಲು ಮತ್ತು ಕಾರ್ಯನಿರ್ವಹಿಸಲು ತಾಂತ್ರಿಕ ಅನುಭವವುಳ್ಳವರಾಗಿರಬೇಕು. ಬಿಡ್ಡುದಾರರು ಸಂಗೀತ ಕಾರಂಜಿಗಳ ತಯಾರಿಕ ಸಂಸ್ಥೆಯವರಾಗಿರಬೇಕು. ಅಥವಾ ಸಾಫ್ಟವೇರ್ ತಂತ್ರಜ್ಞಾನದ ಮೂಲಕ ಸಂಗೀತ ಕಾರಂಜಿಯನ್ನು ನಡೆಸುವ ಸಿಸ್ಟಮ್‌ನ್ನು ಅಭಿವೃದ್ಧಿಪಡಿಸಿದವರಾಗಿರಬೇಕು. ಈ ಸಂಬಂಧವಾಗಿ ದಾಖಲಾತಿಗಳನ್ನು ಟೆಂಡರ್ ನೀಡುವಾಗ ಲಗತ್ತಿಸಿರಬೇಕು.

2. ಸಂಗೀತ ಕಾರಂಜಿ ನಡೆಸುವುದರ ಜೊತೆಗೆ ವಿದ್ಯುತ್ ಶಕ್ತಿಯ ಸಿಸ್ಟಮ್‌ಗಳ ನಿಯಂತ್ರಣಗಳನ್ನು ಮಾಡಬೇಕಾಗಿರುವುದರಿಂದ, 100 ಕೆ.ವಿ.ಎ. ಸಾಮರ್ಥ್ಯ (ಲೋಡ್)ವುಳ್ಳ ವಿದ್ಯುತ್‌ಚ್ಛಕ್ತಿ ಸಿಸ್ಟಮ್‌ನ್ನು ನಿರ್ವಹಿಸಬೇಕು. ಬಿಡ್ಡುದಾರರು ಸಂಗೀತ ಕಾರಂಜಿಗೆ ಬೇಕಾದಂತಹ ವಿದ್ಯುತ್‌ಚ್ಛಕ್ತಿ ಸರ್ಕ್ಯೂಟ್ ನಿರ್ವಹಣೆ ದುರಸ್ಥಿ ಇ ತ್ಯಾದಿಗಳನ್ನು ಕೈಗೊಳ್ಳಬೇಕು. ಹಾಗೂ ಯು.ಜಿ. ಕೇಬಲಿಂಗ್ ಫೌಂಟೇನಿನ ಪ್ಯಾನಲ್ ಬೋರ್ಡ್ ಮತ್ತು ವಿದ್ಯುತ್ ಸರ್ಕ್ಯೂಟ್ ಗಳನ್ನು ಸ್ವತಹಃ ನಿರ್ವಹಿಸಬೇಕು. ಆದ್ದರಿಂದ, ಬಿಡ್ಡುದಾರರು ಅಧಿಕೃತ ವಿದ್ಯುತ್‌ಚ್ಛಕ್ತಿ ನಿರ್ವಹಣೆ ಗುತ್ತಿಗೆ ಲೈಸನ್ಸನ್ನು ಕರ್ನಾಟಕ ವಿದ್ಯುತ್‌ಚ್ಛಕ್ತಿ ಇ ಲಾಖೆಯಿಂದ ಪಡೆದವ ರಾಗಿರಬೇಕು. ಇ ವುಗಳ ಬಗ್ಗೆ ದಾಖಲಾತಿಗಳನ್ನು ಟೆಂಡರ್ ಫಾರಂನೊಂದಿಗೆ ಲಗತ್ತಿಸಿರಬೇಕು.

3. ಇ ಂದಿರಾಗಾಂಧಿ ಸಂಗೀತ ಕಾರಂಜಿಯು ಅಹುಜಾ ಪಬ್ಲಿಕ್ ಸಿಸ್ಟಮ್ ಇ ವರ ಶ್ರವಣ ಸಾಧನಕ್ಕೆ (ಅಡಿಯೋ ರ್‍ಯಾಕ್) ಒಳಪಟ್ಟು ಸ್ಥಾಪಿಸಲಾಗಿದೆ. ಇ ದರ ನಿರ್ವಹಣೆಯು ಕೂಡ ಬಿಡ್ಡುದಾರರದೇ ಆಗಿರುತ್ತದೆ. ಆದ್ದರಿಂದ ಈ ಶ್ರವಣ ಸಾಮಗ್ರಿಗಳ ಸರ್ವಿಸಿಂಗ್ ನಡೆಸಲು ಅಧಿಕೃತ ಪರವಾನಗಿಯುಳ್ಳವರಾಗಿರಬೇಕು. ಈ ಬಗ್ಗೆ ಬಿಡ್ಡುದಾರರು ಆಧಾರಕ್ಕಾಗಿ ದಾಖಲಾತಿಗಳನ್ನು ಟೆಂಡರ್ ಜೊತೆಗೆ ಲಗತ್ತಿಸಿರಬೇಕು.

4. ಸಂಗೀತ ಕಾರಂಜಿಯಲ್ಲಿ ಹೆಚ್ಚುವರಿ ಕಾರ್ಯಕ್ರಮಗಳ ನಿರ್ವಹಣೆ ಬದಲಾವಣೆ ಮತ್ತು ನಿಯಂತ್ರಣ ಬಿಡ್ಡುದಾರರದ್ದಾಗಿರುತ್ತದೆ. ಬಿಡ್ಡುದಾರರು ಅಂತಹ ಕನಿಷ್ಟ ಹತ್ತು ಪ್ರೊಗ್ರಾಮ್‌ಗಳ ಪ್ಯಾಕೇಜ್‌ಗಳನ್ನು ಕಾರಂಜಿಗಳಲ್ಲಿ ನಿರ್ವಹಿಸಿದ ದಾಖಲಾತಿಗಳನ್ನು ಲಗತ್ತಿಸಿರಬೇಕು. ಬಿಡ್ಡುದಾರರು ಹೊಸ ಹೊಸ ಸಂಗೀತದ ಸೆಟ್‌ಗಳ ಪ್ರೊಗ್ರಾಮ್‌ಗಳನ್ನು ಹೊಂದಿದ್ದು, ಅದನ್ನು ಪ್ರಾತ್ಯಕ್ಷತೆ ಮೂಲಕ ಇ ಂದಿರಾಗಾಂಧಿ ಕಾರಂಜಿಯಲ್ಲಿ ತೋರಿಸಬೇಕು.

5. ಯಶಸ್ವಿ ಬಿಡ್ಡುದಾರರು ಅಂತಿಮವಾಗಿ ಬಿಡ್ಡು ನಿರ್ದೇಶಕರಿಂದ ಅನುಮೋದಿಸ್ಪಟ್ಟ ನಂತರ ಇ ಂದಿರಾಗಾಂಧಿ ಸಂಗೀತ ಕಾರಂಜಿ ನಿರ್ವಹಣೆಯನ್ನು ಟೆಂಡರ್ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ತೃಪ್ತಿಕರವಾಗಿ ಚಾಲನೆ ಮತ್ತು ನಿರ್ವಹಣೆ ನಡೆಸಿಕೊಂಡು ಹೋಗಲಾಗುತ್ತದೆ. ಈಬ ಬಗ್ಗೆ ಗುತ್ತಿಗೆ ಕರಾರು ರೂ.200=00 ಗಳ ಛಾಪಾ ಕಾಗದದಲ್ಲಿ ಬರೆದುಕೊಡಬೇಕು.

**ಷರತ್ತು ಮತ್ತು ನಿಬಂಧನೆಗಳು:**

1 ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ.70,000=00 ಗಳಿಗೆ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರಬೇಕು.

2 ಡಿಮ್ಯಾಂಡ್ ಡ್ರಾಫ್ಟ್‌ನ್ನು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್ ಹಾಗೂ ನಿರ್ದೇಶಕರು, ತೋಟಗಾರಿಕೆ ಇ ಲಾಖೆ, ಲಾಲ್‌ಬಾಗ್, ಬೆಂಗಳೂರು-4 ಇ ವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದಿರಬೇಕು.

3 ಮೊಹರಾದ ಟೆಂಡರ್‌ಗಳನ್ನು ದಿನಾಂಕ:6-7-2006 ರಂದು ಟೆಂಡರ್ ದಾರರ ಸಮ್ಮುಖದಲ್ಲಿ ಸಂಜೆ 5.00 ಗಂಟೆಗೆ ತೆರೆಯಲಾಗುವುದು. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣ ಅಧಿಕಾರವನ್ನು ನಿರ್ದೇಶಕರು, ತೋಟಗಾರಿಕೆ ಇ ಲಾಖೆ, ಲಾಲ್‌ಬಾಗ್, ಬೆಂಗಳೂರು ರವರು ಪಡೆದಿರುತ್ತಾರೆ.

4 ಟೆಂಡರ್ ಫಾರಂನ್ನು ದಿನಾಂಕ:1-7-2006 ರಿಂದ 5-7-2006 ರವರೆಗೆ ಕಛೇರಿ ವೇಳೆಯಲ್ಲಿ ಪಡೆಯಬಹುದು ಮತ್ತು ಮೊಹರಾದ ಟೆಂಡರ್‌ಗಳನ್ನು ದಿನಾಂಕ: 6-7-2006 ರ ಮಧ್ಯಾಹ್ನ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು, ಹಾಗೂ ಅಂದು ಸಂಜೆ 5.00 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯ ಲಾಗುವುದು.

5 ಟೆಂಡರ್ ಜೊತೆಯಲ್ಲಿ ಠೇವಣಿ ರೂ.70,000=00 (ರೂ. ಎಪ್ಪತ್ತು ಸಾವಿರ ಮಾತ್ರ)ಗಳ ಡ್ರಾಫ್ಟ್ ಇ ಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

6 ಟೆಂಡರ್‌ಗಳನ್ನು ಕೊಡುವಾಗ ಸೀಲ್ ಮಾಡಿರಬೇಕು. ಮತ್ತು ಲಕೋಟೆಯ ಮೇಲೆ ದಿನಾಂಕ:1-12-2006 ರಿಂದ 30-11-2007 ರವರೆಗೆ ಒಂದು ವರ್ಷದ ಅವಧಿಗೆ ಇ ಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗದ ಸಂಗೀತ ಕಾರಂಜಿಯ ವಾರ್ಷಿಕ ನಿರ್ವಹಣೆ ಮತ್ತು ಚಾಲನೆ ಬಗ್ಗೆ ಟೆಂಡರ್ ಎಂದು ಬರೆದಿರಬೇಕು.

7 ಗಣಕ ಯಂತ್ರ ಚಾಲಿತ ಸಂಗೀತ ಕಾರಂಜಿಯ ಅಳವಡಿಕೆ ಮಾಡಿರುವ ಮತ್ತು 5 ವರ್ಷಗಳು ನಿರ್ವಹಣೆ ಮಾಡಿರುವ ಅನುಭವ ದೃಢೀಕರಣ ಪತ್ರವನ್ನು ನೀಡಬೇಕು.

8 ಟೆಂಡರ್ ದಾರರು ಗಣಕಯಂತ್ರ ಚಾಲಿತ ಸಂಗೀತ ಕಾರಂಜಿಯ ತಯಾರಕರಾಗಿರಬೇಕು.

9 ಟೆಂಡರ್‌ದಾರರು ಕನಿಷ್ಟ 5 ಗಣಕ ಯಂತ್ರ ಚಾಲಿತ ಸಂಗೀತ ಕಾರಂಜಿಯನ್ನು ವಿವಿಧ ಸಂಸ್ಥೆಗಳಲ್ಲಾದರೂ ಚಾಲನೆ ಮತ್ತು ನಿರ್ವಹಣೆಯ ಅನುಭವ ಹೊಂದಿರಬೇಕು.

10 ಟೆಂಡರ್‌ದಾರರು ಕನಿಷ್ಟ 5 ವರ್ಷಗಳನ್ನಾದರೂ ಚಾಲನೆ ಮತ್ತು ನಿರ್ವಹಣೆಯ ಅನುಭವ ಹೊಂದಿರಬೇಕು.

11 ಹಿಂದಿನ 3 ವರ್ಷಗಳ ಆದಾಯ ತೆರಿಗೆ ಕ್ಲಿಯರೆನ್ಸ ಸರ್ಟಿಫಿಕೇಟ್‌ನ್ನು ಲಗತ್ತಿಸಬೇಕು.

12 ರೂ.10.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಬೇಕು.

13 ಸಂಗೀತ ಕಾರಂಜಿಯನ್ನು ಪ್ರತಿ ದಿನ ಸಂಜೆ 7.00 ರಿಂದ 7.30 ಗಂಟೆಯವರೆಗೆ ಹಾಗೂ 8.00 ರಿಂದ 8.30 ಗಂಟೆಯವರೆಗೆ ಅಥವಾ ತೋಟಗಾರಿಕೆ ನಿರ್ದೇಶಕರು, ಅನುಮೋದಿಸುವ ಕಾಲಾವಧಿಯಂತೆ ದಿನಕ್ಕೆ ಎರಡು ಪ್ರದರ್ಶನಗಳನ್ನು ಚಾಲನೆ ಮಾಡಬೇಕು.

14 ಸಂಗೀತ ಕಾರಂಜಿಯನ್ನು ನಿರ್ವಹಣೆ ಮಾಡಲು ಬೇಕಾಗುವ ಡೀಸಲ್ ಡಿ.ಜಿ. ಸೆಟ್ ಹಾಗೂ ಕಂಟ್ರೋಲ್ ರೂಮ್‌ಗಳ ಸಂಪೂರ್ಣ ಪಾಲನೆ ದುರಸ್ಥಿ ಹಾಗೂ ನಿರ್ವಹಣೆಯನ್ನು ಅಂಗೀಕೃತ ಟೆಂಡರ್‌ದಾರರೇ ಟೆಂಡರ್ ಅವಧಿಯಲ್ಲಿ ನಿರ್ವಹಿಸಲು ಬದ್ಧ ರಾಗಿರಬೇಕು. ಹಾಗೂ ಎಲೆಕ್ಟ್ರಿಕಲ್ ಯಾರ್ಡ್ ಲೈಟ್‌ಗಳ ನಿರ್ವಹಣೆಯನ್ನು ಟೆಂಡರ್ ದಾರರೇ ನಿರ್ವಹಿಸತಕ್ಕದ್ದು.

15 ಗುತ್ತಿಗೆ ಅವಧಿಯಲ್ಲಿ ಕಾರಂಜಿಯ ಸಂಪೂರ್ಣ ದುರಸ್ಥಿಯನ್ನು ಸಹ ಟೆಂಡರ್‌ದಾರರೇ ನಿರ್ವಹಿಸಿಕೊಳ್ಳ ಬೇಕಾಗಿರುತ್ತದೆ.

16 ಕಾಲಕಾಲಕ್ಕೆ ತಕ್ಕಂತೆ ವಿದ್ಯುತ್ ಪ್ಯಾನಲ್‌ಗಳನ್ನು, ರೀಲೆ ಕಂಟ್ರೋಲ್ ಪ್ಯಾನಲ್‌ಗಳನ್ನು ಗಣಕ ಯಂತ್ರ ಹಾಗೂ ಬಿಡಿ ಭಾಗಗಳನ್ನು ಸುಸ್ಥಿಯಲ್ಲಿ ಇ ಟ್ಟಿರಬೇಕು. ಯಾವುದೇ ಕಾರಣಕ್ಕೂ ಸಂಗೀತ ಕಾರಂಜಿಯ ಪ್ರತಿದಿನದ 2 ಪ್ರದರ್ಶನಕ್ಕೆ ಅಡ್ಡಿಯುಂಟಾಗದಂತೆ ನೋಡಿಕೊಳ್ಳಬೇಕು.

17 ಪ್ರತಿ ತಿಂಗಳ ನಿರ್ವಹಣೆ ವೆಚ್ಚದ ಬಿಲ್ಲಿನಲ್ಲಿ ನಿಯಮಾನುಸಾರ ವ್ಯಾಟ್ ತೆರಿಗೆ ಹಾಗೂ ಆದಾಯ ತೆರಿಗೆಗಳನ್ನು ಕಟಾಯಿಸಲಾಗುವುದು.

18 ಟೆಂಡರ್‌ದಾರರು ಪ್ರತಿನಿತ್ಯ ಸಮರ್ಪಕವಾಗಿ ಪ್ರದರ್ಶನ ನಡೆಸುವಲ್ಲಿ ವಿಫಲವಾದಲ್ಲಿ ಆ ದಿವಸದ ಪ್ರದರ್ಶನಕ್ಕೆ ವಿತರಿಸಿದ ಟಿಕೆಟ್‌ಗಳ ಮೌಲ್ಯವನ್ನು ಸಂಸ್ಥೆಯವರೇ ಭರಿಸತಕ್ಕದ್ದು.

19 ಪ್ರತಿನಿತ್ಯ ಸಂಗೀತ ಕಾರಂಜಿ ನಿರ್ವಹಣೆಗೆ ಬಳಸುವ ವಿದ್ಯುತ್ ಮೀಟರ್‌ನ ಆರ್.ಆರ್. ಸಂಖ್ಯೆ: 2845 ರ ಪ್ರತಿ ತಿಂಗಳ ಬಿಲ್ಲಿನ ಮೊತ್ತವನ್ನು ಸಂಸ್ಥೆಯವರೇ ಭರಿಸತಕ್ಕದ್ದು, ಹಾಗೂ ಕಾರಂಜಿ ಚಾಲನೆಗೆ ಬೇಕಾಗುವ ನೀರನ್ನು ಸಹ ಸಂಸ್ಥೆಯವರೇ ಖರೀದಿಸಿ ಉಪ ಯೋಗಿಸತಕ್ಕದ್ದು.

20 ಟೆಂಡರ್‌ದಾರರು ಕಾರಂಜಿಯ ಸ್ವಚ್ಛತೆಗೊಳಿಸುವ ಕಾರ್ಯವನ್ನು ಪ್ರತಿವಾರ ಕೈಗೊಳ್ಳಬೇಕು.

ಹೆಚ್ಚಿನ ವಿಷಯಗಳಿಗೆ ಈ ಕಛೇರಿಯನ್ನು ಸಂಪರ್ಕಿಸಿ ಮಾಹಿತಿಯನ್ನು ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು

ಪಿ.ಆರ್. 246 ಕಬ್ಬನ್ ಉದ್ಯಾನವನ, ಬೆಂಗಳೂರು-1.

**FORM - IV**
**(SEE RULE - 12)**
**NOTICE**

It is hereby notified that the undersigned has changed her name from "**KALAVATI DEVENDRAPPA UDAGATTI"** to "**KALAVATI MAHABALESHWAR BANNAD".**

P.D. 100 **KALAVATI DEVENDRAPPA UDAGATTI**